ಕರ್ನಾಟಕ ಸರ್ಕಾರ

# ನುಡಿ ಕನ್ನಡ

## ತೃತೀಯಭಾಷಾ ಕನ್ನಡ ಪಠ್ಯಪುಸ್ತಕ

# ೬

## ಆರನೆಯ ತರಗತಿ

### ಮೊದಲನೆಯ ಹಾಗೂ ಎರಡನೆಯ ಸೆಮಿಸ್ಟರ್

### ೨೦೧೫



**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)**

೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ಮೂರನೆಯ ಹಂತ,
ಬೆಂಗಳೂರು – ೫೬೦೦೮೫

## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು :**

**ಶ್ರೀ ಬಿದರಹಳ್ಳಿ ಕೃಷ್ಣಮೂರ್ತಿ,** ಪ್ರಾಂಶುಪಾಲರು, ಸರ್ವಸೇವಾ ಬೋಧಕ ಶಿಕ್ಷಣಾಲಯ, ಶಿಕ್ಷಕರ ತರಬೇತಿ ಸಂಸ್ಥೆ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ.

**ಸದಸ್ಯರು :**

**ಶ್ರೀ ವಿ. ರಾಜ,** ಕನ್ನಡ ಅಧ್ಯಾಪಕರು, ನ್ಯಾಷನಲ್ ಹೈಸ್ಕೂಲ್, ಬಸವನಗುಡಿ, ಬೆಂಗಳೂರು–೦೪.

**ಶ್ರೀಮತಿ ರೋಹಿಣಿ ಶಶಿಕಾಂತ್ ದಾನಿ,** ಸಹ ಶಿಕ್ಷಕರು. ಸರ್ಕಾರಿ ಉರ್ದು ಹಿರಿಯ ಪ್ರಾಥಮಿಕ ಶಾಲೆ, ರಬಕವಿ ಜಮಖಂಡಿ ತಾಲೂಕು, ಬಾಗಲಕೋಟೆ ಜಿಲ್ಲೆ.

**ಶ್ರೀಮತಿ ಲಲಿತ ವೈ ಎನ್,** ಸಹ ಶಿಕ್ಷಕರು. ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಕಾಚಿಕೆರೆ ಕ್ಯಾಂಪ್, ಶೆಟ್ಟಿಹಳ್ಳಿ, ಶಿವಮೊಗ್ಗ ತಾಲೂಕು.

**ಶ್ರೀಮತಿ ತ್ರಿವೇಣಿ .ಎಂ,** ಸಹ ಶಿಕ್ಷಕರು. ಸರ್ಕಾರಿ ಕಿರಿಯ ಪ್ರಾಥಮಿಕಶಾಲೆ, ಗುಡ್ರುಕೊಪ್ಪ, ಶೆಟ್ಟಿಹಳ್ಳಿ, ಶಿವಮೊಗ್ಗ ತಾಲೂಕು.

**ಶ್ರೀ ಜಿ.ಎಂ. ಜಂಗಿ (ರ.ಬನಹಟ್ಟಿ),** ಕಲಾವಿದರು, ಡಿ.ಎಸ್.ಇ.ಆರ್.ಟಿ, ಬೆಂಗಳೂರು.

**ಪರಿಶೀಲಕರು :**

**ಡಾ. ಪಿ. ಮಹದೇವಯ್ಯ,** ಸಹ ಪ್ರಾಧ್ಯಾಪಕರು, ಕನ್ನಡಭಾಷಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

**ಸಂಪಾದಕ ಮಂಡಳಿ ಸದಸ್ಯರು :**

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ ನಗರ, ಬೆಂಗಳೂರು

**ಡಾ.ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ. ೧೩೭, ೧೨ ನೇ ಕ್ರಾಸ್, ಜೆ.ಪಿ. ನಗರ ೨ನೇ ಹಂತ, ಬೆಂಗಳೂರು

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, 'ರಾಗಿಣಿ', ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್. ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

**ಮುಖ್ಯ ಸಂಯೋಜಕರು :**

**ಪ್ರೊ. ಜಿ.ಎಸ್. ಮುಡಂಬಡಿತ್ತಾಯ,** ಸಂಯೋಜಕರು, ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫.

**ಸಲಹೆ ಮತ್ತು ಮಾರ್ಗದರ್ಶನ :**

**ಶ್ರೀ ನಾಗೇಂದ್ರಕುಮಾರ್,** ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫.

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫.

**ಕಾರ್ಯಕ್ರಮ ಸಂಯೋಜಕರು :**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

# ಮುನ್ನುಡಿ

2005 ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು 2010 ನೇ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು 12 ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು 7 ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. 1 ರಿಂದ 4 ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು 5 ರಿಂದ 10 ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

2005ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach), ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಮದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಕೆಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-85.

**ನಾಗೇಂದ್ರಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-೮೫.

# ಸಮಕ್ಷಮ

ಭಾರತ ಸರ್ಕಾರದ ೨೦೦೫ರ ರಾಷ್ಟ್ರೀಯ ಶಾಲಾ ಪಠ್ಯಕ್ರಮದ ಚೌಕಟ್ಟಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ತ್ರಿಭಾಷಾ ಸೂತ್ರವನ್ನು ಜಾರಿಗೊಳಿಸಿರುವ ಕಾರಣ ಕನ್ನಡೇತರ ಮಾತೃಭಾಷಿಕರು ಕನ್ನಡವನ್ನು ದ್ವಿತೀಯ ಅಥವಾ ತೃತೀಯ ಭಾಷೆಯನ್ನಾಗಿ ಕಲಿಯಲು ಅವಕಾಶ ಕಲ್ಪಿಸಿದೆ. ಕರ್ನಾಟಕದಲ್ಲಿ ಕನ್ನಡವೇ ರಾಜ್ಯಭಾಷೆ, ಪ್ರಾಂತೀಯ ಭಾಷೆ, ಸಂಪರ್ಕ ಭಾಷೆಯಾಗಿದೆ. 'ಕನ್ನಡ' ಪರಿಸರದಲ್ಲಿ ಜನಸಾಮಾನ್ಯರು ದೈನಂದಿನ ವ್ಯವಹಾರಗಳಲ್ಲಿ ಬಳಸುವ ಭಾಷೆಯಾಗಿದೆ. ಈ ಸಹಜ ಸನ್ನಿವೇಶದಲ್ಲಿ ಕನ್ನಡೇತರರೂ ಬದುಕುತ್ತಿರುವುದರಿಂದ ಅವರ ವ್ಯವಹಾರಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ ಕನ್ನಡವನ್ನು ಕಲಿಯಲು ಅವಕಾಶ ಮಾಡಿಕೊಟ್ಟಿದೆ. ಇಂದು ಕನ್ನಡೇತರರೂ ಕನ್ನಡ ಕಲಿಯುವುದು ಅನಿವಾರ್ಯವಾಗಿದೆ.

ಒಂದನೆಯ ತರಗತಿಯಿಂದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸುವುದರ ಜೊತೆಗೆ ಐದನೆಯ ತರಗತಿಯಿಂದ ದ್ವಿತೀಯ ಭಾಷೆಯಾಗಿ, ಪ್ರಸ್ತುತ ಆರನೆಯ ತರಗತಿಯಿಂದ ತೃತೀಯ ಭಾಷೆಯಾಗಿ ಕಲಿಸುವ ಯೋಜನೆಯಿಂದ ಈ ಪಠ್ಯಪುಸ್ತಕ ರಚನೆಯಾಗಿದೆ. ಕನ್ನಡ ಭಾಷೆಯ ಬಗ್ಗೆ ಆಸಕ್ತಿ, ಕುತೂಹಲ, ಪ್ರೀತಿ ಉಂಟಾಗುವಂತೆ ಮಕ್ಕಳ ವಯೋಮಟ್ಟ, ಮಾನಸಿಕ ಮಟ್ಟವನ್ನು ಗಮನದಲ್ಲಿರಿಸಿಕೊಂಡು ಶಿಶುಕೇಂದ್ರಿತ ಪಠ್ಯವನ್ನು ಸಿದ್ಧಗೊಳಿಸಲಾಗಿದೆ.

ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದರ ಹಿನ್ನೆಲೆಯಲ್ಲಿ ಸಾಮರ್ಥ್ಯಾಧಾರಿತ, ಚಟುವಟಿಕೆ ಆಧಾರಿತ ಮತ್ತು ಸಂತಸದಾಯಕ ಸನ್ನಿವೇಶವನ್ನು ಆಧರಿಸಿ ಜನಪ್ರಿಯ ಪ್ರಾಸಗೀತೆ, ಹಾಸ್ಯಗೀತೆ, ಭಾವಗೀತೆ, ಜನಪದಗೀತೆ, ಸಂಭಾಷಣೆ, ಸಾಧಕರ ಸಾಧನೆ, ನಾಡು ನುಡಿ ಪರಿಚಯ, ರೈತನ ದುಡಿಮೆ, ಮೌಲ್ಯಯುತ ಕಥೆ ಹೀಗೆ ಬೇರೆ ಬೇರೆ ಮಾದರಿಯ ಪಾಠಗಳನ್ನು ಅಳವಡಿಸಲಾಗಿದೆ. ಅಂತರ್ಗತ, ರಚನಾತ್ಮಕ ಹಾಗೂ ಸುರಳಿಯಾಕಾರದ ವಿಧಾನ ಅನುಸರಿಸಿದೆ.

ಮಕ್ಕಳನ್ನು ಕಲಿಕೆಗೆ ಸಿದ್ಧಗೊಳಿಸಲು ಹಾಗೂ ಶಿಕ್ಷಕರ ಬೋಧನೆಗೆ ಅನುಕೂಲವಾಗಲು ಪ್ರವೇಶದ ಜೊತೆಗೆ ಪೂರಕ ಚಟುವಟಿಕೆಯನ್ನು ನೀಡಿದೆ. ಲೇಖಕ–ಲೇಖಕಿಯರನ್ನು ಪರಿಚಯಿಸಿದೆ. ಕ್ಷೇತ್ರ, ಸಾಮರ್ಥ್ಯ ನೀಡಿದೆ. ಓದಿ–ತಿಳಿಯಿರಿ ಭಾಗದಲ್ಲಿ ಪ್ರಾದೇಶಿಕ ಪರ್ಯಾಯರೂಪದ ಶಬ್ದಾರ್ಥವನ್ನು, ಗಮನಿಸಿ–ತಿಳಿಯಿರಿ ಭಾಗದಲ್ಲಿ ವಿವರಣಾತ್ಮಕ ಮಾಹಿತಿಯನ್ನು ಸೇರಿಸಿದೆ. ಅಭ್ಯಾಸದಲ್ಲಿ ಗ್ರಹಿಕೆ, ತಿಳುವಳಿಕೆ, ಅಭಿವ್ಯಕ್ತಿ, ಪ್ರಶಂಸಾ ಪ್ರಶ್ನೆಗಳನ್ನು ಕೊಟ್ಟಿದೆ. ಕ್ರಿಯಾತ್ಮಕ ವ್ಯಾಕರಣವನ್ನು ಭಾಷಾಭ್ಯಾಸದಲ್ಲಿ ಸೂಚನಾರೀತಿಯಲ್ಲಿ ನಿರೂಪಿಸಿ, ಸಂಕ್ಷಿಪ್ತ ಮಾಹಿತಿ ನೀಡಿ, ಪ್ರಾಯೋಗಿಕತೆಗೂ ಅವಕಾಶ ಕಲ್ಪಿಸಿದೆ. ಭಾಷಾ ಚಟುವಟಿಕೆಯಲ್ಲಿ ಭಾಷಾ ಸೃಜನಶೀಲತೆಗೆ ಹಾಗೂ ಶುದ್ಧ ಭಾಷಾ ಬಳಕೆಗೆ ಅವಕಾಶ ಮಾಡಿಕೊಟ್ಟಿದೆ. ಪ್ರತಿ ಪಾಠದ ಕೊನೆಯಲ್ಲಿ ಪಾಠದ ಆಶಯಕ್ಕೆ ತಕ್ಕಂತೆ ಸಂದೇಶವನ್ನು ನೀಡಿದೆ. ಪಠ್ಯದ ಅಭ್ಯಾಸದಲ್ಲಿ ಚಟುವಟಿಕೆ, ಭಾಷಾಭ್ಯಾಸ, ಭಾಷಾ ಚಟುವಟಿಕೆಯ ಮುಖೇನ ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳೆಸುವ ಪ್ರಯತ್ನ ಮಾಡಿದೆ. ಗ್ರಹಿಕೆಗೆ ಅನುಕೂಲವಾಗಲೆಂದು, ಕೆಲವು ಪಾಠಗಳಿಗೆ ಪೂರಕ ಓದು, ವ್ಯಾಕರಣ ಮಾಹಿತಿ ಸೇರಿಸಿದೆ. ಈ ಪುಸ್ತಕದಲ್ಲಿ ಉತ್ತರ ಬರೆಯಲು ಅವಕಾಶ ಮಾಡಿರುವುದರಿಂದ ಇದು ಪಠ್ಯ ಹಾಗೂ ಪ್ರಾಯೋಗಿಕ ಅಭ್ಯಾಸ ಸಹಿತ ಪುಸ್ತಕವಾಗಿದೆ.

ತೃತೀಯ ಭಾಷೆ ಆಯ್ಕೆ ಮಾಡಿಕೊಂಡ ಎಲ್ಲಾ ಮಕ್ಕಳ ಭಾಷಾಜ್ಞಾನ ಒಂದೇ ಮಟ್ಟದಲ್ಲಿ ಇರುವುದಿಲ್ಲ. ಹಾಗಾಗಿ ಮಕ್ಕಳು ತಮ್ಮ ಜ್ಞಾನವನ್ನು ತಾವೇ ಕಟ್ಟಿಕೊಳ್ಳಲು ಅನುಕೂಲ ಮಾಡಿಕೊಡುವ ಚಟುವಟಿಕೆಗಳನ್ನು ನೀಡಲಾಗಿದೆ. ಸೃಜನಶೀಲ ಹಾಗೂ ಕ್ರಿಯಾಶೀಲ ಶಿಕ್ಷಕರು ಮಕ್ಕಳಿಗೆ ಭಾಷೆಯ ಬಗ್ಗೆ ಪ್ರೀತಿಯುಂಟಾಗುವಂತೆ ವಿವಿಧ ನೆಲೆಗಳಿಂದ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ, ರಚನಾವಾದಿ ತತ್ತ್ವದನ್ವಯ ಮಕ್ಕಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿ ಇನ್ನಷ್ಟು ಆಕರ್ಷಕ ರೀತಿಯಲ್ಲಿ ಬೋಧಿಸಬೇಕೆಂಬ ಆಶಯ ನಮ್ಮದು. ಪರಿಣಾಮಕಾರಿ ಕಲಿಸುವಿಕೆಯಲ್ಲಿ, ಕಲಿಕೆ ಯಶಸ್ವಿಯಾಗುವಲ್ಲಿ ತರಗತಿ ಶಿಕ್ಷಕರ ಪಾತ್ರವೇ ಬಹಳ ಮುಖ್ಯವಾದುದು. ಕಲಿಕೆ ಪಠ್ಯಪುಸ್ತಕ, ಶಿಕ್ಷಕರು ಹಾಗೂ ತರಗತಿ ಕೋಣೆಗಳ ಮಿತಿಗಳನ್ನು ಮೀರಿ ಬೆಳೆಯಬೇಕು. ತರಗತಿಗಳಲ್ಲಿ ಕಲಿಯುವುದೇ ಅಂತಿಮ ಎಂಬ ಭಾವನೆ ಹೋಗಿ ತರಗತಿಯ ಕಲಿಕೆ, 'ಕಲಿಕೆಯ ಆರಂಭ' ಎನ್ನುವ ಬದಲಾದ ಪಠ್ಯಪುಸ್ತಕದ ಆಶಯವನ್ನು ಈ ಪುಸ್ತಕದಲ್ಲಿ ಕಾಣಬಹುದಾಗಿದೆ.

ಸೆಮಿಸ್ಟರ್ ಪದ್ಧತಿಗನುಸಾರವಾಗಿ ಕ್ಷೇತ್ರ ಹಾಗೂ ಸಾಮರ್ಥ್ಯಕ್ಕೆ ಹೊಂದಿಕೆಯಾಗುವಂತೆ ಮೊದಲ ಸೆಮಿಸ್ಟರ್‌ಗೆ 'ಹಾಡಿ ನಲಿ, ಓದಿ ನಲಿ, ನೋಡಿ ಬರೆ' ಪ್ರವೇಶದೊಂದಿಗೆ ಆರು ಪಾಠಗಳನ್ನು, ಎರಡನೆಯ ಸೆಮಿಸ್ಟರ್‌ಗೆ ಎಂಟು ಪಾಠಗಳನ್ನು ಹಾಗೂ ಪ್ರತಿ ಸೆಮಿಸ್ಟರ್‌ಗೂ ಹೆಚ್ಚಿನ ಓದು, ಅರ್ಥಸಹಿತ ಪದಕೋಶಿಯನ್ನು ಅಳವಡಿಸಿ ಮಕ್ಕಳ ಶಬ್ದ ಸಂಪತ್ತು ಹೆಚ್ಚಾಗುವಂತೆ ಮಾಡಿದೆ. ನಮ್ಮ ಪಠ್ಯಪುಸ್ತಕ ರಚನಾ ಸಮಿತಿಯವರಿಗೆ ಈ ಅವಕಾಶವನ್ನು ಕಲ್ಪಿಸಿದ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಿಗೆ, ಉಪನಿರ್ದೇಶಕರಿಗೆ, ಅಧಿಕಾರಿವರ್ಗದವರಿಗೆ, ಸೂಕ್ತ ಮಾರ್ಗದರ್ಶನ ನೀಡಿದ ಮುಖ್ಯ ಸಂಯೋಜಕರಿಗೆ ಹಾಗೂ ಹಿರಿಯ ಸಹಾಯಕ ನಿರ್ದೇಶಕರಿಗೆ ತಂಡದ ಕೃತಜ್ಞತೆಗಳು.

ಪಠ್ಯಕ್ಕೆ ಆಯ್ಕೆ ಮಾಡಿಕೊಂಡ ಆಕರ ಸಂಪನ್ಮೂಲ ಭಾಗಗಳನ್ನು ಅಳವಡಿಸಿಕೊಳ್ಳಲು ಅನುಮತಿಸಿದ ಲೇಖಕರಿಗೂ, ಕೃತಿ ಸ್ವಾಮ್ಯ ಹೊಂದಿದವರಿಗೂ, ಪಠಪುಸ್ತಕ ರಚನೆಯಲ್ಲಿ ನನ್ನೊಂದಿಗೆ ಅತ್ಯಂತ ಶ್ರದ್ಧೆ, ಆಸಕ್ತಿ, ಕಾಳಜಿಯಿಂದ ಸಹಕರಿಸಿದ ಸನ್ಮಿತ್ರ ಸದಸ್ಯರೆಲ್ಲರಿಗೂ, ಸೂಕ್ತ ಸಲಹೆ ನೀಡಿ ಪುಸ್ತಕ ಮೌಲಿಕವಾಗುವಂತೆ ಮಾಡಿದ ಪರಿಶೀಲಕರಿಗೂ, ಸಂಪಾದಕ ಮಂಡಳಿ ಸದಸ್ಯರಿಗೆ, ಪಠ್ಯದ ಆಶಯಕ್ಕೆ ತಕ್ಕಂತೆ ಅಂದವಾದ ಚಿತ್ರ ಬರೆದುಕೊಟ್ಟ ಕಲಾವಿದರಿಗೂ ಅನಂತ ಧನ್ಯವಾದಗಳು.


**ಬಿದರಹಳ್ಳಿ ಕೃಷ್ಣಮೂರ್ತಿ**

ಅಧ್ಯಕ್ಷರು

ನುಡಿ ಕನ್ನಡ–೬ ಪಠ್ಯಪುಸ್ತಕ ರಚನಾ ಸಮಿತಿ

# ಪರಿವಿಡಿ

ಭಾಗ –೧

# ಮೊದಲನೆಯ ಸೆಮಿಸ್ಟರ್

## ಅ. ಹಾಡಿ ನಲಿ

## ೧. ತಾಯಿ ತಂದೆ



ಮುದ್ದು ಕಂದ ಬಾರೊ ಎಂದು
ತಾಯಿ ನನ್ನ ಕರೆವಳು
ಉಣಲು ತಿನಲು ಕೊಟ್ಟು ನನ್ನ
ಮುದ್ದುಗೈಯುತಿರುವಳು. ॥ ೧ ॥

ಏನು ಬೇಕೋ ಅದನು ಕೊಟ್ಟು
ಅಪ್ಪ ಬುದ್ಧಿ ಹೇಳ್ವರು
ಓದು ಕಂದ ಜಾಣನಾಗು
ಗುಣವ ಗಳಿಸು ಎನುವರು ॥ ೨ ॥

ಸುಳ್ಳು ಗಿಳ್ಳು ಹೇಳಬೇಡ
ಜಾಣ ನೀನು ಎಂಬರು
ಕಷ್ಟಪಟ್ಟು ಕೆಲಸ ಮಾಡು
ಇಷ್ಟ ಸಿದ್ಧಿ ಎಂಬರು ॥ ೩ ॥

ತಾಯಿ ತಂದೆ ನಿತ್ಯ ನಿನ್ನ
ಹಿತದ ಚಿಂತೆಗೈವರು
ನಾಡ ಹಿತಕೆ ದುಡಿಯೊ ಕಂದ
ಸುಖದಿ ಬಾಳು ಎಂಬರು ॥ ೪ ॥

ಅವರ ಮಾತ ಮರೆಯಲಾರೆ
ಅದುವೆ ದಾರಿ ದೀಪವು
ತಾಯಿ ತಂದೆ ದೇವರೆನಗೆ
ಅವರೆ ನನ್ನ ಜೀವವು ॥ ೫ ॥

– ರಾ. ಮೊ. ವಿಶ್ವಾಮಿತ್ರ

# ೨. ಪ್ರೀತಿಯೇ ದೇವರು



ಬಿಡುವಿನ ಸಮಯದಿ ಶಾಲೆಯ ಗೆಳೆಯರು
ಬಯಲಲಿ ಊಟವ ಮಾಡುವೆವು
ತರತರ ಬುತ್ತಿಯ ತರತಮ ಮಾಡದೆ
ಹಂಚಿಯೆ ಎಲ್ಲರು ತಿನ್ನುವೆವು ॥ ೧ ॥

ಚಿಲಿಪಿಲಿ ಎನ್ನುವ ಹಕ್ಕಿಗೂ ತುಸುತುಸು
ಅನ್ನವ ಹಾಕುತ ನಲಿಯುವೆವು
ನೆರವನು ನೀಡಿದ ತೃಪ್ತಿಯ ಮನದಲಿ
ಮೂಡಲು ಮುದದಲಿ ಕುಣಿಯುವೆವು ॥ ೨ ॥

ದಯವೇ ಧರ್ಮವು ಪ್ರೀತಿಯೆ ದೇವರು
ಗುರುಗಳ ನುಡಿಯನು ಅರಿತಿಹೆವು
ವಿಶ್ವಮಾತೆಯ ಮಕ್ಕಳು ಎಲ್ಲರು
ಒಂದೇ ಎಂದು ಬಗೆದಿಹೆವು ॥ ೩ ॥

– ಸಂಗಮೇಶ ಗುಜಗೊಂಡ

## ಆ. ಓದಿ – ನಲಿ

### ಚಿತ್ರ ಸಹಿತ ಕಥೆ ಓದು

### ಒಗ್ಗಟ್ಟಿನಲ್ಲಿ ಬಲ

ಒಬ್ಬ  ಹಕ್ಕಿಗಳಿಗಾಗಿ  ಬೀಸಿದನು. ಬಲೆಯಲ್ಲಿ  ಗಳನ್ನು ಹಾಕಿದನು. ಹಕ್ಕಿಗಳ ಗುಂಪು  ಗಳನ್ನು ನೋಡಿದವು. ಕೆಲವು ಮರಿಹಕ್ಕಿಗಳು ಯನ್ನು ಗಮನಿಸಲಿಲ್ಲ.  ತಿನ್ನಲು ಹೋಗಿ ಸಿಕ್ಕಿ ಕೊಂಡವು. "ಚೀಂವ್ ಚೀಂವ್" ಎಂದು ಕೂಗಿ ಕೊಂಡವು. ನು ದೂರದಲ್ಲಿ ಬರುತ್ತಿರುವುದನ್ನು ಕಂಡವು. ಕೂಡಲೇ ದೊಡ್ಡ ಹಕ್ಕಿಗಳು ಒಂದು ಉಪಾಯ ಹೂಡಿದವು. ಎಲ್ಲಾ ಸೇರಿ ಯನ್ನು ಹಿಡಿದು ಮೇಲೆ ಹಾರಿದವು. ಬೇರೆಡೆಗೆ ಹಾರಿ ಹೋಗಿ ಮರಿಹಕ್ಕಿಗಳನ್ನು ಬಿಡಿಸಿದವು.

## ಇ . ನೋಡಿ – ಬರೆ

೧. ಕೊಟ್ಟಿರುವ ಚಿತ್ರವನ್ನು ಗಮನಿಸಿ ನೀವೂ ಬರೆಯಿರಿ :



ಮೇಲಿನ ಮಾದರಿಯಂತೆ ಚಿತ್ರ ರಚಿಸಿ

೨. ಗೆರೆಗಳನ್ನು ಕೂಡಿಸಿ ಚಿತ್ರ ರಚನೆ ಮಾಡಿ ಬಣ್ಣ ಹಚ್ಚಿರಿ :









ಭಾಗ – ೨

## ಪದ್ಯಪಾಠ – ೧

# ಅನ್ನದಾತ

– ಸತ್ಯಾರ್ಥಿ

**ಪ್ರವೇಶ :**

"ಉಪ್ಪರಿಗೆ ಮನೆಯವರಾದರೂ ಉಪ್ಪಿಲ್ಲದೆ ಉಣ್ಣಲಾರರು", "ಆಗರ್ಭ ಶ್ರೀಮಂತರೂ ಸಹ ಅನ್ನವನ್ನಲ್ಲದೆ ಚಿನ್ನವನ್ನು ತಿನ್ನಲಾರರು". ಎಂಬ ನುಡಿಮುತ್ತುಗಳು ಆಹಾರದ ಮಹತ್ವವನ್ನು ತಿಳಿಸುತ್ತವೆ. ಅಂತಹ ಅನ್ನದಾತ ಎನಿಸಿರುವ ರೈತ ನಮ್ಮ ದೇಶದ ಬೆನ್ನೆಲುಬು.

**ಪೂರಕ ಚಟುವಟಿಕೆ :**

- ರೈತರು ಬಳಸುವ ಉಪಕರಣಗಳ ಹೆಸರನ್ನು ತಿಳಿಸಿರಿ.
- ರೈತರು ಬೆಳೆಯುವ ಬೆಳೆಗಳನ್ನು ತಿಳಿಸಿರಿ.
- ಎರಡು ಗುಂಪುಗಳಲ್ಲಿ ಕುಳಿತು ಅನ್ನದಾತ ಪದಕ್ಕೆ ಸಂಬಂಧಿಸಿದ ವಸ್ತುಗಳನ್ನು ಪಟ್ಟಿ ಮಾಡಿರಿ.





ಇವನೆ ನೋಡು ಅನ್ನದಾತ
ಹೊಲದಿ ದುಡಿದೆ ದುಡಿವನು
ನಾಡ ಜನರು ಬದುಕಲೆಂದು
ದವಸ ಧಾನ್ಯ ಬೆಳೆವನು ॥ ೧ ॥

ಮಳೆಯ ಗುಡುಗು ಚಳಿಯ ನಡುಗು
ಬಿಸಿಲ ಬೇಗೆ ಸಹಿಸುತ
ಬೆವರು ಸುರಿಸಿ ಕಷ್ಟ ಸಹಿಸಿ
ಒಂದೆ ಸಮನೆ ದುಡಿಯುತ ॥ ೨ ॥

ಗಟ್ಟಿ ದೇಹ ದೊಡ್ಡ ಮನಸು
ದೇವನಿಂದ ಪಡೆದನು
ಯೋಗಿಯಾಗಿ ತ್ಯಾಗಿಯಾಗಿ
ಅನ್ನ ನೀಡುತಿರುವನು ॥ ૩ ॥

ಎತ್ತು ಎರಡು ಅವನ ಜೋಡು
ಕೂಡಿ ದುಡಿವ ಗೆಳೆಯರು
ಹಿಗ್ಗು ಕುಗ್ಗು ಏನೆ ಇರಲಿ
ಹೊಂದಿಕೊಂಡು ನಡೆವರು ॥ ೪ ॥

***ರೈತನೇ ದೇಶದ ಬೆನ್ನೆಲುಬು. ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು***



**ಕವಿ ಪರಿಚಯ :**



**ಸತ್ಯಾರ್ಥಿ** ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ **ಚೆನ್ನಬಸಪ್ಪ ಹೊಸಮನಿ**ಯವರು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಒಕ್ಕುಂದ ಗ್ರಾಮದವರು. ಇವರು 'ದಿವ್ಯಜೀವಿ, ಕಿತ್ತೂರ ವೀರಶ್ರೀ, ಮಕ್ಕಳ ಸೊಗಸು, ಪುಟ್ಟಭಾರತ' ಮುಂತಾದ ಕವನ ಸಂಕಲನಗಳನ್ನು ರಚಿಸಿದ್ದಾರೆ. 'ಪುಟ್ಟಕನಸು' ಎಂಬ ಮಕ್ಕಳ ಕಾದಂಬರಿಯನ್ನು, 'ವೀರಸ್ವರ್ಗದಲ್ಲಿ ಭಾರತೀಯರು, ತಿರುಳ್ಗನ್ನಡ ಕನ್ನಡತಿಯರು' ಎಂಬ ನಾಟಕಗಳನ್ನು ರಚಿಸಿದ್ದಾರೆ. ಪ್ರಸ್ತುತ ಪದ್ಯವನ್ನು **ಪುಟ್ಟ ಭಾರತ** ಎನ್ನುವ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

ಕ್ಷೇತ್ರ :– ಆಲಿಸುವುದು

ಸಾಮರ್ಥ್ಯ :– ಸರಳ ಹಾಗೂ ಬಳಕೆಯಲ್ಲಿರುವ ಜನಪ್ರಿಯ ಪ್ರಾಸಗೀತೆ ಮತ್ತು ಕಥೆಗಳನ್ನು ಆಲಿಸುವುದರ ಜೊತೆಗೆ ಅರ್ಥ ಮಾಡಿಕೊಳ್ಳುವುದು.

**ಓದಿ–ತಿಳಿಯಿರಿ :**

ಅನ್ನದಾತ – ರೈತ; ನಾಡ – ನಾಡಿನ, ಊರಿನ, ಪ್ರಾಂತದ; ಹೊಲ – ಜಮೀನು; ಎತ್ತು – ಬಸವ, ನಂದಿ; ಬೇಗೆ – ಉರಿ, ಉಷ್ಣತೆ; ಅನ್ನ – ಆಹಾರ; ದುಡಿ – ಕೆಲಸಮಾಡು; ಸಹಿಸು – ತಾಳಿಕೊಳ್ಳು, ಸೈರಿಸು; ಗೆಳೆಯ – ಸ್ನೇಹಿತ, ಮಿತ್ರ.; ತ್ಯಾಗಿ – ದಾನಿ, ಉದಾರಿ, ಪರೋಪಕಾರಿ; ದವಸಧಾನ್ಯ – ಆಹಾರ ಪದಾರ್ಥಗಳು.

**ಗಮನಿಸಿ–ತಿಳಿಯಿರಿ :**

ಯೋಗಿ – ನಿಯಮಬದ್ಧವಾಗಿ ಕಾರ್ಯನಿರ್ವಹಿಸುತ್ತ ಜೀವನ ನಡೆಸುವವ, ಯೋಗದಲ್ಲಿ ನಿರತನಾದವ.

ಹಿಗ್ಗುಕುಗ್ಗು – ಏರುಪೇರು, ಉತ್ಸಾಹ ನಿರಾಸೆ, ಕೆಲವೊಮ್ಮೆ ಆನಂದ ಮಗದೊಮ್ಮೆ ದುಃಖ

ಗುಡುಗು – ಮಳೆಗಾಲದಲ್ಲಿ ಮೋಡಗಳ ಘರ್ಷಣೆಯಿಂದ ಉಂಟಾಗುವ ಶಬ್ದ

## ಅಭ್ಯಾಸ



**ಅ. ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ :**

೧. ಅನ್ನದಾತನು ಎಲ್ಲಿ ದುಡಿಯುವನು ?

_______________

೨. ನಾಡಿನ ಜನರಿಗಾಗಿ ಅನ್ನದಾತನು ಏನು ಬೆಳೆಯುವನು ?

_______________

೩. ಅನ್ನದಾತನು ಯಾವ ಕಷ್ಟಗಳನ್ನು ಸಹಿಸುತ್ತಾನೆ ?

_______________

೪. ರೈತನು ದೇವರಿಂದ ಪಡೆದ ವರ ಯಾವುದು ?

_______________

೫. ಅನ್ನದಾತನು ಅನ್ನವನ್ನು ನಾಡಿಗೆ ಹೇಗೆ ನೀಡುತ್ತಿರುವನು ?

_______________

೬. ಅನ್ನದಾತನ ಗೆಳೆಯರು ಯಾರು ?

_______________

## ಆ. ಸೂಕ್ತ ಪದಗಳಿಂದ ತುಂಬಿರಿ :

೧. ನಾಡ ಜನರು ಬದುಕಲೆಂದು ______________ ಬೆಳೆವನು.

೨. ಬೆವರು ಸುರಿಸಿ, ಕಷ್ಟ ಸಹಿಸಿ ______________ ದುಡಿಯುತ.

೩. ಗಟ್ಟಿದೇಹ, ದೊಡ್ಡಮನಸು ______________ ಪಡೆದನು.

೪. ಹಿಗ್ಗು ಕುಗ್ಗು ಏನೇ ಇರಲಿ ______________ ನಡೆವರು.

## ಇ. 'ಅ' ಪಟ್ಟಿಗೆ ಸರಿಹೊಂದುವ ಪದವನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.

| | ಅ | ಬ | ಉತ್ತರಗಳು |
|---|---|---|---|
| ೧. | ಅನ್ನದಾತ | ಅ) ನಡುಗು | ______________ |
| ೨. | ಮಳೆ | ಆ) ಕುಗ್ಗು | ______________ |
| ೩. | ಚಳಿ | ಇ) ರೈತ | ______________ |
| ೪. | ಹಿಗ್ಗು | ಈ) ಗುಡುಗು | ______________ |
| ೫. | ದವಸ | ಉ) ಧಾನ್ಯ | ______________ |
| | | ಊ) ವ್ಯಾಪಾರಿ | |



## ಈ. ಗುಂಪಿಗೆ ಸೇರದ ಪದವನ್ನು ಆರಿಸಿ ಬರೆಯಿರಿ :

೧. ಚಳಿಗಾಲ, ಮಳೆಗಾಲ, ನಡುಗಾಲ, ಬೇಸಿಗೆಕಾಲ ______________

೨. ಎತ್ತು, ಎಮ್ಮೆ, ಹೋರಿ, ನಂದಿ ______________

೩. ಬೆಟ್ಟ, ಹೊಲ, ಜಮೀನು, ಗದ್ದೆ ______________

೪. ಗೆಳೆಯ, ಸ್ನೇಹಿತ, ಮಿತ್ರ, ಶತ್ರು ______________

## ಉ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ :

೧. ಅನ್ನದಾತನು ನಾಡಿಗೆ ಹೇಗೆ ಸಹಕಾರಿಯಾಗಿದ್ದಾನೆ ?

______________________________________________

______________________________________________

______________________________________________

೨. ರೈತರ ಜೀವನವನ್ನು ಕುರಿತು ಬರೆಯಿರಿ.

______________________________

______________________________

______________________________

## ಭಾಷಾಭ್ಯಾಸ

**ಅ. ಮಾದರಿಯಂತೆ ಕೊಟ್ಟಿರುವ ಅಕ್ಷರದಿಂದ ಪ್ರಾರಂಭವಾಗುವ ಪದಗಳನ್ನು ಬರೆಯಿರಿ.**

**ಮಾದರಿ :** 'ಮ', ಮನಸ್ಸು ______ ______ ______

______ ______ ______

**ಆ. ಮಾದರಿಯಂತೆ ಕೊಟ್ಟಿರುವ ಅಕ್ಷರಗಳನ್ನು ಬಳಸಿ ಪದ ಬರೆಯಿರಿ.**

| ಅ ಕ ವ ಭ ಧ ರ ಗ ಜ ನ ಸ ಮ ಬ ದ |
|---|

**ಮಾದರಿ :** ಕ : ಕವನ ______ ______ ______ ______

______ ______ ______ ______

**ಇ. ಪದ್ಯದಲ್ಲಿರುವ ಅಂತ್ಯಪ್ರಾಸ ಪದಗಳನ್ನು ಮಾದರಿಯಂತೆ ಪಟ್ಟಿಮಾಡಿರಿ.**

**ಮಾದರಿ :** ದುಡಿವನು – ಬೆಳೆವನು

೧. ______ ______ ೨. ______ ______

೩. ______ ______ ೪. ______ ______

**ಈ. ಮಾದರಿಯಂತೆ ಅಂತ್ಯಪ್ರಾಸ ಪದಗಳನ್ನು ಬರೆಯಿರಿ.**

**ಮಾದರಿ :** ಅಕ್ಕಿ : ಹಕ್ಕಿ, ಚುಕ್ಕಿ, ಲಕ್ಕಿ, ಹೆಕ್ಕಿ, ತಿಕ್ಕಿ, ಉಕ್ಕಿ

ಅಲ್ಲಿ : ______________________________

ಎತ್ತು : ______________________________

ಅನ್ನ : ______________________________

ಹಿಗ್ಗು : ______________________________

## ಭಾಷಾ ಚಟುವಟಿಕೆ

**ಇದರಲ್ಲಿರುವ ಪ್ರಾಣಿಗಳನ್ನು ಪತ್ತೆಹಚ್ಚಿ, ಎಡಕ್ಕೂ, ಬಲಕ್ಕೂ, ಮೇಲಕ್ಕೂ, ಕೆಳಕ್ಕೂ, ಓರೆಯಾಗಿಯೂ ಅಕ್ಷರಗಳಲ್ಲಿ ಜೋಡಿಸಿರಿ.**

**ಉದಾ :** ಎತ್ತು, ಎಮ್ಮೆ

| ಅ | ಹಾ | ಜಿ | ರಾ | ಫೆ | ಲ | ಜೀ | ಬ್ರಾ | ವಿ |
|---|---|---|---|---|---|---|---|---|
| ಳಿ | ಸಿ | ವೃ | ಹು | ಮೊ | ಸಿಂ | ಹ | ಜಿ | ಕ |
| ಉ | ಲಿ | ಇ | ಲಿ | ಸಿ | ರಿ | ಬು | ಪಿ | ರ |
| ಈ | ಮೆ | ಳೆ | ಬಿ | ತ್ತು | ರ | ಆ | ಮಿ | ಡಿ |
| ಪೆ | ಸ | ಮ | ಎ | ಸ | ಲಿ | ಗೆ | ನೆ | ಪೊ |
| ಮೊ | ಕೋ | ತಿ | ಲ | ಮ್ಮೆ | ಗ | ಜ | ಜಿಂ | ಗು |
| ಪಿ | ನು | ತ್ತೆ | ನಾ | ಯಿ | ಸ | ಸಿ | ದೆ | ಕೆ |
| ಮೀ | ಕ | ಸಾ | ಕಿ | ಸಾ | ರಂ | ಗ | ಸು | ಡಿ |



## ಅಭ್ಯಾಸ ಚಟುವಟಿಕೆ

೧. ಆಕಾಶವಾಣಿಯಲ್ಲಿ ಪ್ರಸಾರವಾಗುವ ಶಿಶುಗೀತೆ, ಭಾವಗೀತೆ, ಜನಪದಗೀತೆಗಳನ್ನು ಹಾಗೂ ಧ್ವನಿ ಸುರುಳಿಗಳ ವಿವಿಧ ಗೀತೆಗಳನ್ನು ಕೇಳಿ ಅವುಗಳ ಪ್ರಾಸಪದಗಳನ್ನು ಗುರುತಿಸಿ ಅಭಿನಯಿಸುತ್ತಾ ರಾಗವಾಗಿ ಹಾಡಿರಿ.

೨. ಹಿರಿಯರಿಂದ, ಶಿಕ್ಷಕರಿಂದ ಜನಪ್ರಿಯ ಪ್ರಾಸಗೀತೆ, ಕಥೆಗಳನ್ನು ಕೇಳಿ, ಹೇಳಿರಿ.

## ವ್ಯಾಕರಣ ಮಾಹಿತಿ

# ಕನ್ನಡ ಅಕ್ಷರ ಮಾಲೆ

**ಕನ್ನಡ ಅಕ್ಷರ ಮಾಲೆಯಲ್ಲಿ ೪೯ ಅಕ್ಷರಗಳಿವೆ.**

ಅ ಆ ಇ ಈ ಉ ಊ ಋ ಎ ಏ ಐ
ಒ ಓ ಔ ಅಂ ಅಃ
ಕ ಖ ಗ ಘ ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ ಮ
ಯ ರ ಲ ವ ಶ ಷ ಸ ಹ ಳ

### ಕನ್ನಡ ಅಕ್ಷರ ಮಾಲೆಯ ವಿಧಗಳು

- ಸ್ವರಗಳು(೧೩)
  - ಹ್ರಸ್ವ ಸ್ವರ(೬): ಅ ಇ ಉ ಋ ಎ ಒ
  - ದೀರ್ಘಸ್ವರ(೭): ಆ ಈ ಊ ಏ ಐ ಓ ಔ
- ಯೋಗವಾಹಗಳು(೨)
  - ಅನುಸ್ವಾರ(೧): ಂ
  - ವಿಸರ್ಗ(೧): ಃ
- ವ್ಯಂಜನಗಳು (೩೪)
  - ವರ್ಗೀಯ ವ್ಯಂಜನಗಳು(೨೫): ಕ್ ಖ್ ಗ್ ಘ್ ಙ್ / ಚ್ ಛ್ ಜ್ ಝ್ ಞ್ / ಟ್ ಠ್ ಡ್ ಢ್ ಣ್ / ತ್ ಥ್ ದ್ ಧ್ ನ್ / ಪ್ ಫ್ ಬ್ ಭ್ ಮ್
  - ಅವರ್ಗೀಯ ವ್ಯಂಜನಗಳು(೯): ಯ್ ರ್ / ಲ್ ವ್ / ಶ್ ಷ್ / ಸ್ ಹ್ / ಳ್

## ಗದ್ಯಪಾಠ – ೨

# ಜಗಮೆಚ್ಚಿದ ಸಾರಥಿಯಾಗು

**ಪ್ರವೇಶ :**

ಮಕ್ಕಳ ಭವಿಷ್ಯವನ್ನು ರೂಪಿಸುವುದು ತಂದೆ – ತಾಯಿ ಕರ್ತವ್ಯ. "ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರು" ಎನ್ನುವ ಮಾತು ತಾಯಿಯ ಮಹತ್ವವನ್ನು ಹೇಳುತ್ತದೆ. ಬಾಳಿಗೊಂದು ಗುರಿ, ಆದರ್ಶ ಇಟ್ಟುಕೊಳ್ಳುವಂತೆ ಹಾಗೂ ಅದನ್ನು ಪ್ರಾಮಾಣಿಕ ಪ್ರಯತ್ನದಿಂದ ಈಡೇರಿಸುವಲ್ಲಿ ಹಿರಿಯರ ಪ್ರೇರಣೆ ಅಗತ್ಯ.

**ಪೂರಕ ಚಟುವಟಿಕೆ :**

- ನಿಮ್ಮ ತಾಯಿಯ ವಿಶೇಷ ಗುಣಗಳನ್ನು ತಿಳಿಸಿರಿ.
- ತಾಯಿ ನೀಡಿದ ಉತ್ತಮ ಸಂಸ್ಕಾರದಿಂದ ಸಾಧನೆಮಾಡಿದ ಸಾಧಕ ವ್ಯಕ್ತಿಗಳನ್ನು ತಿಳಿಸಿರಿ.
- ನಿಮ್ಮ ಮನೆಯಲ್ಲಿ ನಿಮಗೆ ಯಾರ್ಯಾರು ಮಾರ್ಗದರ್ಶನ ಮಾಡುತ್ತಾರೆ?

ನರೇಂದ್ರನ ತಾಯಿ ಭುವನೇಶ್ವರಿದೇವಿ ಸದ್ಗುಣ ಸಂಪನ್ನೆ, ಭಕ್ತಿ ಪರಾಯಣೆ









*(ಮಗನನ್ನು ಕರೆದುಕೊಂಡು ಒಳಬಂದು ಗೋಡೆಯ ಮೇಲೆ ತಗುಲಿಸಿದ್ದ ಚಿತ್ರವನ್ನು ಮಗನಿಗೆ ತೋರಿಸುತ್ತಾ.........)*




“ಮಗು, ತುಂಬಾ ಸಂತೋಷ, ನೀನು ನಿಜಕ್ಕೂ ಸಾರಥಿಯಾಗಬೇಕು. ಶ್ರೀಕೃಷ್ಣನ ಸಾರಥ್ಯ ನೋಡು, ಮನ ಮನದ ಕತ್ತಲೆ ತೊಳೆಯುವ ಸಾರಥಿ ನೀನಾಗು, ಭಾರತೀಯರ ಜಗಮೆಚ್ಚಿದ ಸಾರಥಿಯಾಗು” ಎಂದು ಮಗನನ್ನು ಪ್ರೋತ್ಸಾಹಿಸಿದಳು.

ತಾಯಿಯ ಮಾತು ನರೇಂದ್ರನ ಮೇಲೆ ಪ್ರಭಾವ ಬೀರಿತು. ತಾಯಿಯನ್ನು ಪೂಜಿಸದೇ ಇರುವವರು ಯಾರೂ ಕೀರ್ತಿವಂತರಾಗಿಲ್ಲ.



"ತಾಯಿಯ ಅಪೇಕ್ಷೆಯಂತೆ ಮುಂದೆ ನರೇಂದ್ರ, **'ಸ್ವಾಮಿ ವಿವೇಕಾನಂದ'**ರಾಗಿ ಜಗದ ಸಾರಥಿಯಾಗಿ ತೋರಿದರು".



*ಒಬ್ಬ ಆದರ್ಶ ತಾಯಿ ನೂರು ಜನ ಗುರುಗಳಿಗಿಂತಲೂ ಶ್ರೇಷ್ಠಳು.*

ಕ್ಷೇತ್ರ :– ಮಾತನಾಡುವುದು

ಸಾಮರ್ಥ್ಯ :– ಅಕ್ಷರ, ಪದ ಮತ್ತು ಸರಳ ವಾಕ್ಯಗಳನ್ನು ಸರಿಯಾಗಿ ಉಚ್ಚರಿಸುವುದು.

### ಓದಿ – ತಿಳಿಯಿರಿ :

ಸದ್ಗುಣ – ಒಳ್ಳೆಯಗುಣ; ಸಾರಥಿ – ರಥ ಓಡಿಸುವವ; ಚಾವಟಿ – ಬಾರುಕೋಲು; ಪ್ರಭಾವ – ತೇಜಸ್ಸು, ಬಲ, ಹಿರಿಮೆ; ಸಾರೋಟು – ಜೋಡು ಕುದುರೆಗಳನ್ನು ಹೂಡಿದ ಗಾಡಿ; ಲಗಾಮು – ಕಡಿವಾಣ; ಧನ್ಯ – ಪುಣ್ಯವಂತ; ತ್ಯಾಗ – ದಾನ.

### ಗಮನಿಸಿ – ತಿಳಿಯಿರಿ :

ಭಕ್ತಿ ಪರಾಯಣಿ – ಭಕ್ತಿ ವಿಷಯದಲ್ಲಿ ತಲ್ಲೀನಳಾದವಳು.

ಶ್ರೀಕೃಷ್ಣ – ಯದುವಂಶದ ದೇವಕಿ ಹಾಗೂ ವಸುದೇವರ ಕಿರಿಯ ಮಗ. ಮಹಾಭಾರತದ ಯುದ್ಧದಲ್ಲಿ ಅರ್ಜುನನಿಗೆ ಸಾರಥಿಯಾಗಿ ಗೆಲುವು ತಂದುಕೊಟ್ಟವನು.

ಅರ್ಜುನ – ಕ್ಷತ್ರಿಯ, ಪಾಂಡುರಾಜ ಹಾಗೂ ಕುಂತಿಯ ಮಗ. ಇಂದ್ರನ ಅಂಶದಿಂದ ಜನಿಸಿದವ, ಮಧ್ಯಮ ಪಾಂಡವ.



## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ನರೇಂದ್ರನ ತಾಯಿಯ ಹೆಸರೇನು ?

________________________________

೨. ನರೇಂದ್ರ ದೊಡ್ಡವನಾದ ಮೇಲೆ ಏನಾಗಬೇಕೆಂದು ಬಯಸುತ್ತಾನೆ ?

________________________________

೩. ನರೇಂದ್ರ 'ನಾನೇ ಧನ್ಯ' ಎಂದು ಏಕೆ ಹೇಳುತ್ತಾನೆ ?

________________________________

೪. ನರೇಂದ್ರನ ಭವಿಷ್ಯದ ಕನಸು ಯಾರ ಮನಸ್ಸಿನಲ್ಲಿ ಮೂಡಿದೆ ?

________________________________

೫. ತಾಯಿಯ ಅಪೇಕ್ಷೆಯಂತೆ ನರೇಂದ್ರ ಮುಂದೆ ಏನಾಗಿ ತೋರಿದನು ?

________________________________

**ಆ. ಸರಿ–ತಪ್ಪು ಗುರುತಿಸಿರಿ, ಸರಿಯಾಗಿದ್ದರೆ ☑ ಅಥವಾ ತಪ್ಪಿದ್ದರೆ ☒ ಚಿಹ್ನೆ ಹಾಕಿರಿ:**

೧. ನರೇಂದ್ರನ ತಾಯಿ ಸದ್ಗುಣ ಸಂಪನ್ನೆ. ☐

೨. ನಾನೊಬ್ಬ ಕುದುರೆ ಸಾರೋಟದ ಸಾರಥಿಯಾಗುವುದಿಲ್ಲ. ☐

೩. ಕುದುರೆಗಳ ಲಗಾಮನ್ನು ಎಡಗೈಯಲ್ಲಿ ಹಿಡಿಯುವೆ. ☐

೪. ಮಗು, ಅರ್ಜುನ ಶ್ರೀಕೃಷ್ಣನ ರಥದ ಸಾರಥಿಯಾಗಿದ್ದಾನೆ. ☐

**ಇ. ಯಾರು, ಯಾರಿಗೆ ಹೇಳಿದರು ?**

೧. "ಸಾರೋಟಿನ ಕೆಲಸ ಎಂತಹದ್ದು ಗೊತ್ತೆ ಮಗು?"

ಯಾರು ಹೇಳಿದರು? ________________

ಯಾರಿಗೆ ಹೇಳಿದರು? ________________

೨. "ಭಾರತೀಯರ ಜಗಮೆಚ್ಚಿದ ಸಾರಥಿಯಾಗು"

ಯಾರು ಹೇಳಿದರು? ________________

ಯಾರಿಗೆ ಹೇಳಿದರು? ________________

೩. "ತಾಯಿ, ನನ್ನ ಭವಿಷ್ಯದ ಸುಂದರ ಕನಸು ನಿನ್ನ ಮನಸ್ಸಿನಲ್ಲಿ ಮೂಡಿದೆ".

ಯಾರು ಹೇಳಿದರು? ________________

ಯಾರಿಗೆ ಹೇಳಿದರು? ________________

## ಈ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ತಾಯಿ ನರೇಂದ್ರನಿಗೆ ಚಿತ್ರ ತೋರಿಸುತ್ತ ಏನೆಂದು ಹೇಳಿದಳು ?

________________________________________

________________________________________

________________________________________

೨. ಜನರ ಒಳಿತಿಗಾಗಿ ನೀವೇನು ಮಾಡಬೇಕೆಂದು ಬಯಸುವಿರಿ ?

________________________________________

________________________________________

________________________________________

## ಭಾಷಾಭ್ಯಾಸ

## ಅ. ಕೆಳಗಿನ ಪದಗಳನ್ನು ಬಳಸಿ ವಾಕ್ಯ ರಚಿಸಿರಿ :

೧. ಸದ್ಗುಣ = ____________________

೨. ಸಾರಥಿ = ____________________

೩. ಕುದುರೆ = ____________________

೪. ಪೂಜಿಸು = ____________________

## ಆ. ಮಾದರಿಯಂತೆ ಸ್ಪಷ್ಟವಾಗಿ ಉಚ್ಚರಿಸಿ ಅದರಂತೆ ಬರೆಯಿರಿ :

**ಮಾದರಿ :** ಸಂಸ್ಕೃತಿ – ಸಂಸ್ಕೃತಿ

೧. ಸದ್ಗುಣ : __________ ೨. ಶ್ರೀಕೃಷ್ಣ : __________

೩. ಪ್ರೋತ್ಸಾಹಿಸು : __________ ೪. ತ್ಯಾಗಮೂರ್ತಿ : __________

## ಇ. ಮಾದರಿಯಂತೆ ಮುಂದಿನ ಎರಡೆರಡು ಪದಗಳನ್ನು ಬರೆಯಿರಿ.

**ಮಾದರಿ :** ನಮ್ಮ – ನಮ್ಮದು – ನಮ್ಮವರು

೧. ನನ್ನ : __________ __________

೨. ನಿನ್ನ : __________ __________

೩. ನಿಮ್ಮ : __________ __________

೪. ತಮ್ಮ : __________ __________

## ಭಾಷಾ ಚಟುವಟಿಕೆಗಳು

### ೧. ಢಂ ಢಂ ಆಟ

ವೃತ್ತಾಕಾರದಲ್ಲಿ ನಿಂತಿರುವ ಎಲ್ಲರ ಕೈಯಲ್ಲಿ ಒಂದೊಂದು ಅಕ್ಷರ ಬರೆದ ಮಿಂಚು ಫಲಕವಿರಲಿ. ಮಧ್ಯದಲ್ಲಿ ನೆಲದ ಮೇಲೆ 'O' (ಸೊನ್ನೆ, ಅನುಸ್ವಾರ) ಬರೆಯಿರಿ. ಪ್ರಾರಂಭಕ್ಕೆ ಒಬ್ಬರು ತಮ್ಮಲ್ಲಿರುವ ಅಕ್ಷರಕ್ಕೆ ಅನುಸ್ವಾರ ಸೇರಿಸಿ ಜೋರಾಗಿ ಓದಲಿ, ಅನಂತರ ಇನ್ನೊಬ್ಬರ ಕಡೆ ಬೆರಳು ತೋರಿಸಲಿ. ಅವರೂ ತಮ್ಮಲ್ಲಿರುವ ಅಕ್ಷರದೊಂದಿಗೆ ಅನುಸ್ವಾರ ಸೇರಿಸಿ ಜೋರಾಗಿ ಓದಲಿ. ಸರಿಯಾಗಿ ಓದದವರು ಆಟದಿಂದ ಹೊರಕ್ಕೆ ಹೋಗಲಿ.

**ಮಾದರಿ :** ಮಂ






## ಅಭ್ಯಾಸ ಚಟುವಟಿಕೆಗಳು

೧. 'ಕಥನಚಿತ್ರ, (ಕಾಮಿಕ್ಸ್) ಚಂದಮಾಮ, ಬಾಲಮಿತ್ರ, ಮುಂತಾದ ಪುಸ್ತಕಗಳನ್ನು ಸಂಗ್ರಹಿಸಿರಿ, ಓದಿ ಗ್ರಹಿಸಿದ್ದನ್ನು ಕಥಾ ರೂಪದಲ್ಲಿ ತರಗತಿಯಲ್ಲಿ ಹೇಳಿರಿ.

೨. ಪಕ್ಷಿಗಳ ಚಿತ್ರಗಳನ್ನು ಸಂಗ್ರಹಿಸಿ, ಅವುಗಳನ್ನು ಉಪಯೋಗಿಸಿ ಚಿತ್ರಸರಣಿ ಕಥೆ ಬರೆಯಿರಿ.

೩. ತರಗತಿಯಲ್ಲಿ ಶಿಕ್ಷಕರ ಮಾರ್ಗದರ್ಶನದಲ್ಲಿ ಆಶುಭಾಷಣ ಹಾಗೂ ರಸಪ್ರಶ್ನೆ ಕಾರ್ಯಕ್ರಮವನ್ನು ನಡೆಸಿರಿ.

೪. ನಿಮ್ಮ ಒಳಿತಿಗಾಗಿ ಶ್ರಮಿಸುತ್ತಿರುವ ತಂದೆ-ತಾಯಿಯರ ವ್ಯಕ್ತಿತ್ವದ ಗುಣಗಳ ಬಗ್ಗೆ ತಿಳಿಸಿರಿ.

## ವ್ಯಾಕರಣ ಮಾಹಿತಿ

**ಸ್ವರಗಳು** : ಸ್ವತಂತ್ರವಾಗಿ ಉಚ್ಚರಿಸುವ ಅಕ್ಷರಗಳು. ಸ್ವರಗಳಲ್ಲಿ ಎರಡು ವಿಧಗಳಿವೆ.

೧. **ಹ್ರಸ್ವಸ್ವರ** : ಒಂದು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳು (೬)

ಅ ಇ ಉ ಋ ಎ ಒ

೨. **ದೀರ್ಘಸ್ವರ** : ಎರಡು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳು (೭)

ಆ ಈ ಊ ಏ ಐ ಓ ಔ

**ಮಾತ್ರಾ ಕಾಲ** : ಒಂದು ಅಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲ ಪ್ರಮಾಣ.

**ಯೋಗವಾಹ** : ಒಂದು ಅಕ್ಷರದ ಸಂಬಂಧವನ್ನು ಹೊಂದಿದ ಮೇಲೆಯೇ ಉಚ್ಚರಿಸಲು ಬರುವ ಅಕ್ಷರಗಳು. ಯೋಗವಾಹಗಳಲ್ಲಿ ಎರಡು ವಿಧಗಳಿವೆ.

| ೧) ಂ = ಅನುಸ್ವಾರ | ೨) ಃ = ವಿಸರ್ಗ |
|---|---|
| (ಒಂದು ಅಕ್ಷರಗಾತ್ರದ ಸೊನ್ನೆ) | (ಎರಡು ಸಣ್ಣ ಸೊನ್ನೆಗಳು ಒಂದರ ಕೆಳಗೆ ಒಂದು) |
| **ಉದಾ :** ಅಂಗಳ | **ಉದಾ :** ದುಃಖ |

## ಪೂರಕ ಓದು

### ೧. ಪ್ರಶ್ನೆ !

ಅಮ್ಮನ ತೋಳಿನ ತೆಕ್ಕೆಯಲ್ಲಿ
ಸೆರಗದಂಚಿನ ಮರೆಯಲ್ಲಿ
ತನ್ನ ತಾನರಿಯದೆ !
ನೇರ ದೃಷ್ಟಿ ಮುಗ್ಧ ನಗೆ ಬೀರುತ
ಘಳಿಗೆಗೊಮ್ಮೆ ಅಳುವ
ಹಾಲುಗಲ್ಲದ ಹಸುಗೂಸು
ಮುಂದೇನಾಗುವುದು ಬಲ್ಲವರಾರು !

### ೨. ಬುದ್ಧನ ನಗು

ಬುದ್ಧನ ನಗು
ಜಗವನ್ನೇ ಗೆದ್ದಿತು
ಕಾರಣ;
ಆತ ಆಸೆಯನ್ನೇ ಗೆದ್ದವ !

– ಎಸ್.ಪಿ. ಹೊಸಪೇಟೆ

# ಪದ್ಯಪಾಠ – ೩

# ಮರಗಳ ಮನವಿ

– ಜಯವಂತ ಕಾಡದೇವರ

**ಪ್ರವೇಶ :**

ಸಸ್ಯಗಳಿಗೂ ಮಾನವನಿಗೂ ನಿಕಟವಾದ ಸಂಬಂಧವಿದೆ. ಗಿಡ, ಮರ, ಕೆರೆ, ನದಿ, ಕೀಟ, ಪಕ್ಷಿ, ಪ್ರಾಣಿ ಮುಂತಾದವುಗಳು ಸಮತೋಲನದಲ್ಲಿದ್ದರೆ ಮಾನವನ ಜೀವನವು ಸುಗಮ ಹಾಗೂ ಸುರಕ್ಷಿತವಾಗಿರುತ್ತದೆ. ಆದುದರಿಂದ ನಮ್ಮ ಪರಿಸರದಲ್ಲಿ ಗಿಡ, ಮರಗಳನ್ನು ಬೆಳೆಸಿ, ರಕ್ಷಿಸಬೇಕು.

**ಪೂರಕ ಚಟುವಟಿಕೆ :**

- ಮರದ ಉಪಯೋಗಗಳನ್ನು ತಿಳಿಸಿರಿ.
- ಮಕ್ಕಳು ಎರಡು ಗುಂಪುಗಳಾಗಿ ಮರಗಳ ಹೆಸರು ಮತ್ತು ಔಷಧಿ ಸಸ್ಯಗಳ ಹೆಸರನ್ನು ಪಟ್ಟಿ ಮಾಡಿರಿ.
- ಗಿಡ ನೆಡುತ್ತಿರುವ ದೃಶ್ಯದ ಚಿತ್ರಗಳನ್ನು ಸಂಗ್ರಹಿಸಿ ಚರ್ಚಿಸಿರಿ.
- ಮರಗಳ ಸಂರಕ್ಷಣೆ, ವನಮಹೋತ್ಸವ ಹಾಗೂ ವಿಶ್ವಪರಿಸರದಿನದ ಬಗ್ಗೆ ಚರ್ಚಿಸಿರಿ.



ಕಲ್ಲನು ಎಸೆದರೂ ಹಣ್ಣನೇ ಕೊಡುವ
ಬಿಸಿಲಲಿ ನಿಂತರೂ ನೆರಳನೇ ನೀಡುವ
ಹಕ್ಕಿ ಸಂಕುಲಕೆ ಆಶ್ರಯವಾಗಿರುವ
ಭೂಮಿ ತಾಯಿಗೆ ಹಸಿರನು ಉಡಿಸುವ
ನಮ್ಮನ್ನೇತಕೆ ಕಡಿಯುವಿರಿ ?



ನಮ್ಮಿಂದಲ್ಲವೇ ಇಳೆ–ಬೆಳೆ ಹಸಿರು
ನಮ್ಮಿಂದಲ್ಲವೇ ಜೀವಕೆ ಉಸಿರು
ನಮ್ಮಿಂದಲ್ಲವೇ ಎಲ್ಲೆಡೆ ಚೇತನ
ನಮ್ಮೊಡನೇತಕೆ ನಿಮ್ಮಯ ಹಗೆತನ
ನಮ್ಮನ್ನೇತಕೆ ಕಡಿಯುವಿರಿ ?

ಇಲ್ಲಿದೆ ಗಿಳಿಗಳ ಸಿಹಿಸಿಹಿ ಮಾತು

ಕೋಗಿಲೆ ಹಾಡಿನ ನಾದದಿ ಬೆರೆತು

ಕೇಳುವಿರೆಲ್ಲರೂ ನೆರಳಲಿ ಕುಳಿತು

ನಲಿವಿರಿ ನಿಮ್ಮಯ ನೋವನು ಮರೆತು

ನಮ್ಮನ್ನೇತಕೆ ಕಡಿಯುವಿರಿ ?

ಪರಿಸರದಲ್ಲಿನ ವಿಷಾನಿಲ ಹೀರುವ

ಪರಿಶುದ್ಧ ಗಾಳಿಯ ಕಂಪನು ಬೀರುವ

ಓಝೋನಿನ ಪದರಿನ ರಕ್ಷಣೆ ಮಾಡುವ

ಜೀವಲೋಕಕೆ ಪ್ರಾಣವೇ ಆಗಿಹ

ನಮ್ಮನ್ನೇತಕೆ ಕಡಿಯುವಿರಿ ?

ಮನುಜರೆ ಕೇಳಿರಿ ದಯವಿಟ್ಟು

ಮರಗಳ ಮನವಿಯನೊಂದಿಷ್ಟು

ಉಳಿಸಿರಿ ಬೆಳೆಸಿರಿ ಕಾಡನ್ನು

ರಕ್ಷಿಸಿಕೊಳ್ಳಿರಿ ನಿಮ್ಮನ್ನು

ಕಡಿಯಬೇಡಿರಿ ನಮ್ಮನ್ನು.



*ಗಿಡಮರಗಳನ್ನು ಪ್ರೀತಿಸಿರಿ. ಪರಿಸರ ಸಂರಕ್ಷಣೆ ನಮ್ಮೆಲ್ಲರ ಹೊಣೆ*



**ಕವಿ ಪರಿಚಯ :**



ಜಯವಂತ ಕಾಡದೇವರು ಬಾಗಲಕೋಟೆ ಜಿಲ್ಲೆಯ ಜಮಖಂಡಿಯವಯವರು. ೩೪ ವರ್ಷಗಳ ಕಾಲ ಬನಹಟ್ಟಿಯ ಎಸ್. ಆರ್. ಎ ಕಾಲೇಜಿನಲ್ಲಿ ಇತಿಹಾಸ ಉಪನ್ಯಾಸಕರಾಗಿ ಸೇವೆಗೈದಿದ್ದಾರೆ. ಮಕ್ಕಳಿಗಾಗಿ 'ಮಾತಾಡುವ ಗಿಳಿ', 'ಬನ್ನಿರಿ ಮಕ್ಕಳೆ ಕಥೆ ಹೇಳುವೆ', 'ದೇಶ ಕಟ್ಟೋಣ ಬನ್ನಿ' ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ 'ಮರಗಳ ಮನವಿ' ಪುಸ್ತಕಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ ಬಂದಿದೆ. ಪ್ರಸ್ತುತ ಪದ್ಯವನ್ನು **'ಮರಗಳ ಮನವಿ'** ಎಂಬ ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.

ಕ್ಷೇತ್ರ :– ಆಲಿಸುವುದು.

ಸಾಮರ್ಥ್ಯ :– ಪದ್ಯದಲ್ಲಿರುವ ಸರಳ ಮಾಹಿತಿಯನ್ನು ಸಂಗ್ರಹಿಸಿ, ಯಾರು? ಯಾವಾಗ? ಎಲ್ಲಿ? ಪ್ರಶ್ನೆಗಳಿಗೆ ಉತ್ತರಿಸುವುದು.

## ಓದಿ – ತಿಳಿಯಿರಿ :

ಸಂಕುಲ – ಸಮೂಹ, ಗುಂಪು; ಹಗೆತನ – ಶತ್ರುತ್ವ, ವೈರತ್ವ; ಕಂಪು – ಸುಗಂಧ, ಪರಿಮಳ, ಸುವಾಸನೆ; ಮನವಿ – ಕೋರಿಕೆ, ಬೇಡಿಕೆ, ಅರಿಕೆ; ಇಳೆ – ಭೂಮಿ, ಧರಣಿ, ಪೃಥ್ವಿ, ಧರೆ; ಚೇತನ – ಜೀವ, ಚೈತನ್ಯ;

## ಗಮನಿಸಿ – ತಿಳಿಯಿರಿ :

**ವಿಷಾನಿಲ** – ವಿಷದಿಂದ ಕೂಡಿರುವ ಗಾಳಿ,

**ಓಝೋನ್ ಪದರ** – ಸೂರ್ಯನ ನೇರಳಾತೀತ ಕಿರಣಗಳಿಂದ ಜೀವಿಗಳನ್ನು ರಕ್ಷಿಸುವ ಒಂದು ರಕ್ಷಾ ಕವಚ.



## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ :

೧. ಮರವು ಯಾರಿಗೆ ಆಶ್ರಯವಾಗಿದೆ ?

_______________

೨. ಭೂಮಿಗೆ ಹಸಿರನ್ನು ಉಡಿಸುವವರು ಯಾರು ?

_______________

೩. ಇಂಪಾಗಿ ಹಾಡುವ ಪಕ್ಷಿ ಯಾವುದು ?

_______________

೪. ನಮ್ಮ ನೋವನ್ನು ಎಲ್ಲಿ ಮರೆಯುತ್ತೇವೆ ?

_______________

೫. ವಿಷಾನಿಲವನ್ನು ಯಾವುದು ಹೀರುವುದು ?

_______________

## ಆ. ಗುಂಪಿಗೆ ಸೇರದ ಪದ ಗುರುತಿಸಿ ಬರೆಯಿರಿ.

೧. ಇಳೆ, ಭಾನು, ಭೂಮಿ, ಪೃಥ್ವಿ = ______________

೨. ನಲಿವು, ಸಂತೋಷ, ನೋವು, ಆನಂದ = ______________

೩. ಇಂಪು, ಕಂಪು, ಸುಗಂಧ, ಸುವಾಸನೆ = ______________

೪. ನಾಡು, ಅಡವಿ, ಕಾಡು, ಅರಣ್ಯ = ______________

## ಇ. ಕೆಳಗಿನ ಪದ್ಯವನ್ನು ಪೂರ್ಣಗೊಳಿಸಿರಿ.

ಇಲ್ಲಿದೆ ಗಿಳಿಗಳ ______________

________________________

________________________

______________ ಕಡಿಯುವಿರಿ ?

## ಈ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಮರಗಳ ಉಪಯೋಗಗಳೇನು ?

________________________________________

________________________________________

________________________________________

೨. ಇತ್ತೀಚಿನ ದಿನಗಳಲ್ಲಿ ಹೆಚ್ಚು ಸೆಕೆ ಎನಿಸುತ್ತಿದೆ ಏಕೆ ?

________________________________________

________________________________________

________________________________________

೩. ಮರಗಳು ಮನುಜರಿಗೆ ಏನೆಂದು ಮನವಿ ಮಾಡುತ್ತವೆ ?

________________________________________

________________________________________

________________________________________

೪. ನಮ್ಮೊಡನೇತಕೆ ಹಗೆತನ ಎಂದು ಮರವು ಕೇಳಲು ಕಾರಣವೇನು ?

______________________________

______________________________

______________________________

## ಭಾಷಾಭ್ಯಾಸ

### ಅ. ಕೆಳಗಿನ ಪ್ರಾಸಪದಗಳನ್ನು ಓದಿರಿ.

ಇಳೆ – ಬೆಳೆ ಹಸಿರು – ಉಸಿರು

ಬೆರೆತು – ಮರೆತು ಚೇತನ – ಹಗೆತನ

### ಆ. ಕೆಳಗಿನವುಗಳಿಗೆ ಪ್ರಾಸಪದಗಳನ್ನು ಬರೆಯಿರಿ.

೧. ಗೆಜ್ಜೆ – ______ ೩. ಹೀರುವ – ______

೨. ಸಿಹಿ – ______ ೪. ನಲಿವು – ______

### ಇ. ಈ ಕೆಳಗಿನ ಪದಗಳ ಅರ್ಥವ್ಯತ್ಯಾಸ ತಿಳಿಯಿರಿ.

೧. ನಗೆ – ನೆಗೆ ೪. ಹುಲಿ – ಹುಳಿ

೨. ಹುಸಿ – ಹಸಿ ೫. ಒಲೆ – ಓಲೆ

೩. ಕೆರೆ – ಕರೆ ೬. ದನ – ಧನ



## ಭಾಷಾ ಚಟುವಟಿಕೆ

### ಅ. ಕೆಳಗಿನವುಗಳಿಗೆ ಸೂಕ್ತ ಪದಗಳನ್ನು ತುಂಬಿರಿ :

೧. ಕಲ್ಪವೃಕ್ಷವೆಂದು ಕರೆಯಲ್ಪಡುವ ಮರ ತೆಂ [ ] [ ] [ ] ರ.

೨. ವಿದ್ಯಾರ್ಥಿಗಳ ಸಂಗಾತಿ ಪತ್ರ [ ] [ ] [ ]

೩. ಕನ್ನಡದ ಮೊದಲ ರಾಷ್ಟ್ರಕವಿ ಗೋ [ ] [ ] [ ]

೪. ಪ್ರತಿ ದಿನ ಹಲವಾರು ಸುದ್ದಿಗಳನ್ನು ಇದರಿಂದ ತಿಳಿಯುತ್ತೇವೆ
ದಿ [ ] [ ] [ ] ಕೆ.

## ಅಭ್ಯಾಸ ಚಟುವಟಿಕೆ

೧. ಹಣ್ಣನ್ನು ಕೊಡುವ ಮರಗಳ ಹೆಸರುಗಳನ್ನು ಪಟ್ಟಿ ಮಾಡಿರಿ.

೨. ವಿವಿಧ ರೀತಿಯ ಎಲೆಗಳನ್ನು ಸಂಗ್ರಹಿಸಿ ಅಭ್ಯಾಸ ಪುಸ್ತಕಕ್ಕೆ ಅಂಟಿಸಿ ಯೋಜನೆ ತಯಾರಿಸಿರಿ.

೩. ಔಷಧಿ ಸಸ್ಯಗಳನ್ನು ಪಟ್ಟಿ ಮಾಡಿ ಶಿಕ್ಷಕರೊಂದಿಗೆ ಚರ್ಚಿಸಿರಿ.

೪. ಮರದ ಅಂದವಾದ ಚಿತ್ರ ಬರೆದು ಭಾಗಗಳನ್ನು ಗುರುತಿಸಿರಿ.

೫. ಮರಗಳನ್ನು ಕಡಿಯುವುದರಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ ಐದಾರು ವಾಕ್ಯಗಳಲ್ಲಿ ಬರೆಯಿರಿ.

## ವ್ಯಾಕರಣ ಮಾಹಿತಿ

ವ್ಯಂಜನಗಳು : ಸ್ವರಗಳ ಸಹಾಯದಿಂದ ಉಚ್ಚರಿಸುವ ಅಕ್ಷರಗಳು.

**ವ್ಯಂಜನಗಳು – ೩೪**

**ವರ್ಗೀಯ ವ್ಯಂಜನಗಳು (೨೫)**
ವರ್ಗೀಕರಿಸಲು ಬರುವ ಅಕ್ಷರಗಳು

**ಅವರ್ಗೀಯ ವ್ಯಂಜನಗಳು (೯)**
ವರ್ಗೀಕರಿಸಲು ಬರದ ಅಕ್ಷರಗಳು



| ಕ್ರ.ಸಂ | ವರ್ಗಗಳು | ಅಲ್ಪಪ್ರಾಣ | ಮಹಾಪ್ರಾಣ | ಅಲ್ಪಪ್ರಾಣ | ಮಹಾಪ್ರಾಣ | ಅನುನಾಸಿಕ | ಅಕ್ಷರ ಸಂಖ್ಯೆ |
|---|---|---|---|---|---|---|---|
| ೧ | ಕವರ್ಗ | ಕ್ | ಖ್ | ಗ್ | ಘ್ | ಙ್ | ೫ |
| ೨ | ಚವರ್ಗ | ಚ್ | ಛ್ | ಜ್ | ಝ್ | ಞ್ | ೫ |
| ೩ | ಟವರ್ಗ | ಟ್ | ಠ್ | ಡ್ | ಢ್ | ಣ್ | ೫ |
| ೪ | ತವರ್ಗ | ತ್ | ಥ್ | ದ್ | ಧ್ | ನ್ | ೫ |
| ೫ | ಪವರ್ಗ | ಪ್ | ಫ್ | ಬ್ | ಭ್ | ಮ್ | ೫ |

**ವರ್ಗೀಯ ವ್ಯಂಜನಗಳಲ್ಲಿ ಮೂರು ಬಗೆಗಳಿವೆ**

೧. ಅಲ್ಪಪ್ರಾಣ : ಕಡಿಮೆ ಉಸಿರಿನಿಂದ ಉಚ್ಚರಿಸುವ ವ್ಯಂಜನಗಳು.

೨. ಮಹಾಪ್ರಾಣ : ಹೆಚ್ಚು ಉಸಿರಿನಿಂದ ಉಚ್ಚರಿಸುವ ವ್ಯಂಜನಗಳು.

೩. ಅನುನಾಸಿಕ : ಮೂಗಿನ ಸಹಾಯದಿಂದ ಉಚ್ಚರಿಸುವ ವ್ಯಂಜನಗಳು.

### ಅವರ್ಗೀಯ ವ್ಯಂಜನಗಳು :

ಯ್ ರ್ ಲ್ ವ್ ಶ್ ಷ್ ಸ್ ಹ್ ಳ್

# ಗದ್ಯಪಾಠ – ೪

## ಸಾಧಕರು

– ಅರವಿಂದ ಮುಳಗುಂದ್

– ಶಮಶೋದ್ದೀನ್ ಬಾ ಝೂರೆ

**ಪ್ರವೇಶ :**

ಪ್ರತಿಯೊಬ್ಬ ಮನುಷ್ಯನಲ್ಲೂ ಒಂದಲ್ಲಾ ಒಂದು ಪ್ರತಿಭೆ ಇರುತ್ತದೆ. ಆ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಿದರೆ ವ್ಯಕ್ತಿತ್ವ ಅರಳುತ್ತದೆ. ಸಮಾಜಕ್ಕೂ ದೊಡ್ಡ ಕೊಡುಗೆಯಾಗುತ್ತದೆ. ಕ್ರೀಡೆ, ಸಂಗೀತ, ಸಾಹಿತ್ಯ, ನೃತ್ಯ, ಶಿಲ್ಪಕಲೆ, ಚಿತ್ರಕಲೆ, ಮೊದಲಾದ ಕ್ಷೇತ್ರಗಳಲ್ಲಿ ಅಸಾಧಾರಣ ಸಾಧನೆ ಮಾಡಿದ ಸಾಧಕರು ನಮಗೆ ಇಂದಿಗೂ ಸ್ಫೂರ್ತಿದಾಯಕರಾಗಿದ್ದಾರೆ.

**ಪೂರಕ ಚಟುವಟಿಕೆ :**

- ನಿಮ್ಮ ಸುತ್ತಮುತ್ತಲಲ್ಲಿ ಪ್ರಸಿದ್ಧಿ ಪಡೆದ ವ್ಯಕ್ತಿಗಳ ಹೆಸರು ತಿಳಿಸಿರಿ ಮತ್ತು ಅವರು ಯಾವ ಕ್ಷೇತ್ರದಲ್ಲಿ ಪ್ರಸಿದ್ಧರೆಂಬುದನ್ನು ಪಟ್ಟಿಮಾಡಿರಿ.
- ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಸಾಧಕರ ಬಗ್ಗೆ ವಿವರಿಸಿರಿ.
- ನೀವು ಶಾಲೆಯ ಯಾವ ಯಾವ ಸ್ಪರ್ಧೆಗಳಲ್ಲಿ ಭಾಗವಹಿಸಲು ಇಷ್ಟಪಡುವಿರಿ?



### ೧. ಸ್ವರ ಸಾಮ್ರಾಟ



ಒಬ್ಬ ಹುಡುಗ ದಿನಾಲು ಶಾಲೆಗೆ ಹೋಗುತ್ತಿದ್ದನು. ಆದರೆ ಪ್ರತಿದಿನವೂ ಶಾಲೆಯಿಂದ ಮನೆಗೆ ತಡವಾಗಿ ಬರುತ್ತಿದ್ದನು. ಎಷ್ಟೇ ವಿಚಾರಿಸಿದರೂ ಕಾರಣ ಹೇಳುತ್ತಿರಲಿಲ್ಲ. ಒಮ್ಮೆ ಆ ಹುಡುಗನ ತಂದೆ ಪೇಟೆ ಬೀದಿಯಲ್ಲಿ ಹೋಗುತ್ತಿದ್ದರು. ಆಗ ಅಲ್ಲಿಯೇ ಇದ್ದ ಗ್ರಾಮಫೋನ್ ರಿಕಾರ್ಡ್ ಅಂಗಡಿಯ ಮಾಲೀಕರೊಬ್ಬರು ತಂದೆಯನ್ನು ಕರೆದರು. "ನಿಮ್ಮ ಮಗ ಭಾಳ ಚೆಂದ ಹಾಡತಾನ್ರಿ.. ನೀವು ಕೇಳಿಲ್ಲೇನ್ರಿ ? ಶಾಲೆ ಬಿಟ್ಟ ತಕ್ಷಣ ಇಲ್ಲಿಗೇ ಬಂದು ಕೂಡತಾನ.. ನಾನು ಅವನಿಗೆ ಹಾಡುಗಳನ್ನು ಹಾಕಿ ಕೇಳಿಸ್ತೀನಿ. ಹಾಡುಗಳನ್ನು ಕೇಳಿ ಕೇಳಿ ಅದರ್ಹಾಂಗ ಅವನೂ ಹಾಡತಾನ್ರಿ" ಎಂದು ಹೇಳಿದರು. ಆಗ ತಂದೆಗೆ ಮಗ ಶಾಲೆಯಿಂದ ತಡವಾಗಿ ಬರುವ ಕಾರಣ, ಹಾಗೆಯೇ ಮಗನ ಅಭಿರುಚಿಯು ತಿಳಿಯಿತು. ಮಗನ ಆಸೆಗೆ ತಕ್ಕಂತೆ ಸಂಗೀತ ಪಾಠಕ್ಕೆ ಕಳುಹಿಸಿ ಸಂಗೀತ ಕಲಿಯಲು ನೆರವಾದರು.

ಹೀಗೆ ಚಿಕ್ಕಂದಿನಲ್ಲಿಯೇ ಸಂಗೀತದ ಬಗ್ಗೆ ಆಸಕ್ತಿ ಬೆಳೆಸಿಕೊಂಡು ದೊಡ್ಡವರಾದ ಮೇಲೆ

ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ದಿಗ್ಗಜರೆನಿಸಿಕೊಂಡವರು ಯಾರು ಗೊತ್ತೇ? ಅವರೇ 'ಭಾರತರತ್ನ' ಪ್ರಶಸ್ತಿ ಪುರಸ್ಕೃತ ಪಂಡಿತ ಭೀಮಸೇನ ಜೋಶಿಯವರು.

ಭೀಮಸೇನರ ತಂದೆ ಗುರುರಾಜ. ತಾಯಿ ರಮಾಬಾಯಿ. ಗುರುಗಳು ಸವಾಯಿ ಗಂಧರ್ವರು. ಭೀಮಸೇನರು ೦೪-೦೨-೧೯೨೨ರಂದು ಗದಗ ಜಿಲ್ಲೆಯ ರೋಣ ಎಂಬ ಊರಿನಲ್ಲಿ ಜನಿಸಿದರು.

ಭೀಮಸೇನರು ಶಾಂತ ಸ್ವಭಾವದವರು. ಪ್ರತಿ ಸಂಗೀತ ಕಚೇರಿಯನ್ನು ಪರೀಕ್ಷೆಯಾಗಿ ಸ್ವೀಕರಿಸುತ್ತಿದ್ದರು. ಸಂಗೀತದ ವಿವಿಧ ರಾಗಗಳಲ್ಲಿ ಕವಿಯ ಭಾವನೆಗಳನ್ನು ಮನಮುಟ್ಟುವಂತೆ ಹೇಳುವ ಕಲೆ ಅವರಿಗೆ ಸಿದ್ಧಿಯಾಗಿತ್ತು. ವೇದಿಕೆಯಲ್ಲಿ ಹಾಡಲು ಪ್ರಾರಂಭಿಸಿದರೆ ಕೇಳುಗರು ಮೈಮರೆಯುತ್ತಿದ್ದರು. ಇಂತಹ ಪ್ರತಿಭಾನ್ವಿತ ಪಂಡಿತ ಭೀಮಸೇನ ಜೋಶಿಯವರು ೨೪ನೇ ಜನವರಿ ೨೦೧೧ ರಲ್ಲಿ ನಮ್ಮನ್ನಗಲಿದರು. ಅವರ ಸಾಧನೆ ಸಂಗೀತ ಕ್ಷೇತ್ರದಲ್ಲಿ ಅಮರವಾಗಿ ಉಳಿದಿದೆ.

## ೨. ಜ್ಞಾನದ ಅರಸ



"ಬೆಳೆಯುವ ಸಿರಿ ಮೊಳಕೆಯಲ್ಲೆ ನೋಡು" ಎನ್ನುವ ಹಾಗೆ ಒಬ್ಬ ಶಿಕ್ಷಣ ತಜ್ಞರು ತಮ್ಮ ಬಾಲ್ಯದಲ್ಲಿ ಆಡಿದ ಆಟಗಳು ಎಲ್ಲ ಮಕ್ಕಳಿಗಿಂತ ಭಿನ್ನವಾಗಿವೆ. ಅವರು ಮನೆಯಲ್ಲಿನ ಸಾಮಾನು, ಪೆಟ್ಟಿಗೆಗಳನ್ನು ರೈಲುಗಾಡಿಗಳಂತೆ ಸಾಲಾಗಿ ಜೋಡಿಸಿ ತಮ್ಮ ತಂದೆಯ ಪಗಡಿಯನ್ನು ಧರಿಸಿಕೊಂಡು ತಮ್ಮ ಅಕ್ಕಂದಿರಿಗೆ "ನೀವು ಎಲ್ಲರೂ ಜೋರಾಗಿ ಹೇಳಿರಿ, ದಿಲ್ಲಿಯಿಂದ ಮೌಲಾನಾ ಬರುತ್ತಿದ್ದಾರೆ, ದೂರ ಸರಿಯಿರಿ, ದಾರಿಬಿಡಿ ಮತ್ತು ನೀವೆಲ್ಲರೂ ಜೈಕಾರ ಹಾಕಿ" ಎಂದು ಹೇಳುತ್ತ ನಂತರ ಆ ಬಾಲಕ ರಾಜಗಾಂಭೀರ್ಯದಿಂದ ಹೆಜ್ಜೆ ಹಾಕುತ್ತಾ ಎತ್ತರವಾದ ಸ್ಥಳದಲ್ಲಿ ನಿಂತು ಜೋರಾಗಿ ಭಾಷಣ ಮಾಡುತ್ತಿದ್ದರು. ಮನೆಯಲ್ಲಿ ಎಲ್ಲರೂ ಬಾಲಕನ ಭಾಷಣ ಕೇಳಿ ಚಪ್ಪಾಳೆ ತಟ್ಟುತ್ತಿದ್ದರು. ಚಿಕ್ಕಂದಿನಿಂದ ವಿದ್ಯಾ ಬುದ್ಧಿಯಲ್ಲೂ ಜಾಣನಾಗಿದ್ದ ಬಾಲಕನೇ ಮುಂದೆ ಸ್ವತಂತ್ರ ಭಾರತದ ಪ್ರಥಮ ಶಿಕ್ಷಣಮಂತ್ರಿಗಳಾದ ಮೌಲಾನಾ ಅಬುಲ್ ಕಲಾಮ್ ಅಜಾದರು.

ಮೌಲಾನಾರವರು ೧೧-೧೧-೧೮೮೮ ರಂದು ಜನಿಸಿದರು. ತಂದೆ ಖೈರೂದ್ದೀನ್, ತಾಯಿ ಅಲಿಯಾಬೇಗಂ. ಅಬುಲ್ ಕಲಾಮ್‌ರವರು ತಮ್ಮ ಹನ್ನೆರಡನೇ ವಯಸ್ಸಿನಲ್ಲಿ ಅರಬ್ಬಿ, ಫಾರಸಿ ಮತ್ತು ಉರ್ದು ಭಾಷೆಗಳನ್ನು ಓದಿದ್ದರು. ಬಾಲ್ಯದಿಂದಲೇ ಸಾಹಿತ್ಯದ ಅಭಿರುಚಿ ಹೊಂದಿದ ಇವರು 'ಆಜಾದ್' ಕಾವ್ಯನಾಮದಿಂದ ಸಾಹಿತ್ಯ ಕೃಷಿ ಮಾಡಿರುವವರು.

ಮೌಲಾನಾ ಆಜಾದರು ಉತ್ತಮ ಪತ್ರಿಕೋದ್ಯಮಿಗಳಾಗಿದ್ದರು. ೧೨ನೇ ವಯಸ್ಸಿನಲ್ಲಿಯೇ ತಮ್ಮ ಸಂಪಾದಕತ್ವದಲ್ಲಿ 'ಅಲ್‌ಮಿಸ್‌ಬಾಹ' ಎಂಬ ಪತ್ರಿಕೆಯನ್ನು ಹೊರತಂದು ಎಲ್ಲರನ್ನೂ ಬೆರಗುಗೊಳಿಸಿದರು. ಅನಂತರ ಅವರು 'ಅಲ್‌ಹಿಲಾಲ್' ಮತ್ತು 'ಅಲ್‌ಬಲಾಗ್' ಎಂಬ ಪತ್ರಿಕೆಗಳ ಮೂಲಕ ಭಾರತೀಯರನ್ನು ಜಾಗೃತಗೊಳಿಸಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದ ಕಿಡಿ ಹೊತ್ತಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮ ಗಾಂಧೀಜಿ ಮತ್ತು ಪಂಡಿತ ಜವಾಹರಲಾಲ್ ನೆಹರೂರೊಂದಿಗೆ ಭಾಗವಹಿಸಿ ಕ್ರಿ.ಶ. ೧೯೨೨ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಘಟನೆಯ ಅಧ್ಯಕ್ಷಸ್ಥಾನ ಅಲಂಕರಿಸಿದರು. ಗಾಂಧೀಜಿಯವರು ಆಜಾದರನ್ನು 'ಜ್ಞಾನದ ಅರಸ' ಎಂದು ಕರೆದರು.

ಆಜಾದರು ಕ್ರಿ.ಶ. ೧೯೫೮ ಫೆಬ್ರವರಿ ೨೨ರಂದು ನಿಧನರಾದರು. ಭಾರತ ಸರ್ಕಾರವು ಅವರಿಗೆ ಮರಣೋತ್ತರ 'ಭಾರತರತ್ನ' ಪ್ರಶಸ್ತಿ ನೀಡಿ ಗೌರವಿಸಿದೆ. ಇವರು ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಸಾಧನೆಯನ್ನು ಗಮನಿಸಿ ಭಾರತ ಸರ್ಕಾರವು ಆಜಾದರ ಹುಟ್ಟಿದ ದಿನವಾದ ನವೆಂಬರ್ ೧೧ರಂದು ಪ್ರತಿವರ್ಷ 'ರಾಷ್ಟ್ರೀಯ ಶಿಕ್ಷಣ ದಿನ' ವನ್ನಾಗಿ ಇಡೀ ರಾಷ್ಟ್ರಾದ್ಯಂತ ಆಚರಿಸಲಾಗುತ್ತಿದೆ. ಬನ್ನಿ, ನಾವೂ ಈ ಮಹಾನ್ ವ್ಯಕ್ತಿಗೆ ಗೌರವ ಸಲ್ಲಿಸೋಣ.

> **"ಆಸಕ್ತಿ ನಿರ್ದಿಷ್ಟ ಗುರಿ, ಛಲ ಹಾಗೂ ನಿರಂತರ ಪ್ರಾಮಾಣಿಕ ಪ್ರಯತ್ನಗಳು ಮನುಷ್ಯನನ್ನು ಸಾಧಕನನ್ನಾಗಿಸುತ್ತವೆ."**

## ಲೇಖಕರ ಪರಿಚಯ :

೧. **ಅರವಿಂದ ಮುಳಗುಂದರು** ಭೀಮಸೇನ ಜೋಶಿಯವರಿಗೆ ಸಂಬಂಧಿಸಿದ ಘಟನೆ ಹಾಗೂ ಚಿತ್ರಗಳನ್ನು ವಿವಿಧೆಡೆಯಿಂದ ಸಂಪಾದಿಸಿ 'ಭಾರತರತ್ನ ಭೀಮಸೇನ ಜೋಶಿ' ಎಂಬ ಪುಸ್ತಕವನ್ನು ಅಂಕಿತ ಪ್ರಕಾಶನದಿಂದ ಹೊರತಂದಿದ್ದಾರೆ. ಆ ಪುಸ್ತಕದ ಆಧಾರದಿಂದ 'ಸ್ವರಸಾಮ್ರಾಟ' ಗದ್ಯಪಾಠ ಸಿದ್ಧಪಡಿಸಿದೆ.



೨. **ಶಮಶೋದ್ದೀನ ಬಾ ಝೂರೆಯವರು** ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಬನಹಟ್ಟಿಯವರು. ಉರ್ದು, ಕನ್ನಡದಲ್ಲಿ ರಚಿಸಿದ ಭಾವೈಕ್ಯತೆ ಹಾಗೂ ದೇಶಪ್ರೇಮ ಸಾರುವ ಹಲವಾರು ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ಚಾಂದ್ ಕೆ ಪಾರ್ ಚಲೋ' ಕವನ ಸಂಕಲನ ಪ್ರಕಟಗೊಂಡಿದೆ. ಅವರ ಪತ್ರಿಕಾ ಲೇಖನದ ಆಧಾರದಿಂದ 'ಜ್ಞಾನದ ಅರಸ' ಗದ್ಯಪಾಠವನ್ನು ಸಿದ್ಧಪಡಿಸಿದೆ.



ಕ್ಷೇತ್ರ :- ಓದುವುದು

ಸಾಮರ್ಥ್ಯ :- ಮುದ್ರಿತ ಅಕ್ಷರ, ಪದ ಮತ್ತು ಸರಳ ವಾಕ್ಯಗಳನ್ನು ಓದುವುದು.

## ಓದಿ - ತಿಳಿಯಿರಿ :

ವಿಚಾರಿಸು - ವಿವರಕೇಳು, ತಿಳಿದುಕೊ; ಮಾಲೀಕ - ಯಜಮಾನ, ಒಡೆಯ; ಆಸಕ್ತಿ - ವಿಷಯದಲ್ಲಿನ ಮನಸ್ಸು, ಪ್ರೀತಿ ; ಪುರಸ್ಕೃತ - ಗೌರವಿಸಲ್ಪಟ್ಟ ;ತಜ್ಞರು - ಅರಿತವರು, ತಿಳಿದವರು; ಪೇಟೆಬೀದಿ - ಅಂಗಡಿಗಳನ್ನು ಹೊಂದಿದ ರಸ್ತೆ; ಅಭಿರುಚಿ - ಇಷ್ಟ, ಆಸೆ; ಪ್ರಶಸ್ತಿ - ಪುರಸ್ಕಾರ, ಪಾರಿತೋಷಕ; ಅಗಲು - ಬಿಟ್ಟುಹೋಗು, ಸಾಯು; ನಿಧನ - ಸಾವು, ಮರಣ; ವಿಭಿನ್ನ - ಬೇರೆಗೊಂಡ, ಬೇರೆ ರೀತಿಯ; ನೆರವು - ಬೆಂಬಲ, ಸಹಾಯ; ದಿಗ್ಗಜ - ಪ್ರಸಿದ್ಧ, ಹೆಸರಾಂತ; ಸ್ವೀಕರಿಸು - ಪಡೆದುಕೊಳ್ಳು; ಪಗಡಿ - ರುಮಾಲು, ಪೇಟ; ಅಲಂಕರಿಸು - ಶೃಂಗರಿಸು; ಕಚೇರಿ - ಕಾರ್ಯಾಲಯ; ಬೆರಗು - ಆಶ್ಚರ್ಯ.

**ಗಮನಿಸಿ – ತಿಳಿಯಿರಿ :**

| | | |
|---|---|---|
| ಗ್ರಾಮಫೋನ್ | : | ಹಿಂದಿನ ಕಾಲದಲ್ಲಿ ಹಾಡುಗಳನ್ನು ಕೇಳಲು ಉಪಯೋಗಿಸುತ್ತಿದ್ದ ಒಂದು ಸಾಧನ. |
| ಭಾರತರತ್ನ | : | ಬೇರೆ ಬೇರೆ ಕ್ಷೇತ್ರದಲ್ಲಿ ವಿಶೇಷ ಸಾಧನೆಗೈದ ಸಾಧಕರಿಗೆ ಭಾರತ ಸರಕಾರ ಕೊಡುವ ಸರ್ವಶ್ರೇಷ್ಠ ಪ್ರಶಸ್ತಿ |
| ರಾಜಗಾಂಭೀರ್ಯ | : | ಒಬ್ಬ ಮನುಷ್ಯನ ಗಂಭೀರತೆಗೆ ಇರುವ ಘನತೆ. |
| ಮರಣೋತ್ತರ ಪ್ರಶಸ್ತಿ | : | ವಿಶೇಷ ಸಾಧನೆ ಮಾಡಿದವರಿಗೆ ಮರಣದ ನಂತರ ನೀಡಲಾಗುವ ಪ್ರಶಸ್ತಿ. |

## ಅಭ್ಯಾಸ

**ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪಂಡಿತ ಭೀಮಸೇನ ಜೋಶಿಯವರು ಯಾವ ಕ್ಷೇತ್ರದಲ್ಲಿ ದಿಗ್ಗಜರೆನಿಸಿಕೊಂಡರು ?

_______________

೨. ಭೀಮಸೇನರ ತಂದೆ, ತಾಯಿಯ ಹೆಸರೇನು ?

_______________

೩. ಭೀಮಸೇನರು ಯಾವ ಊರಿನಲ್ಲಿ ಜನಿಸಿದರು ?

_______________

೪. ಸ್ವತಂತ್ರ ಭಾರತದ ಪ್ರಥಮ ಶಿಕ್ಷಣ ಮಂತ್ರಿಗಳು ಯಾರು ?

_______________

೫. ಮೌಲಾನಾರವರ ಕಾವ್ಯನಾಮ ಯಾವುದು ?

_______________

೬. ಗಾಂಧೀಜಿಯವರು ಮೌಲಾನಾ ಆಜಾದ್‌ರನ್ನು ಏನೆಂದು ಕರೆದರು ?

_______________

**ಆ. ಗುಂಪಿಗೆ ಸೇರದ ಪದ ಗುರುತಿಸಿ ಬರೆಯಿರಿ.**

೧. ಪಿಟೀಲು, ತಂಬೂರಿ, ತಬಲ, ಕಾಗದ = ____________

೨. ಶಿಕ್ಷಣ, ಪುಸ್ತಕ, ರೈತ, ಶಾಲೆ = ____________

೩. ವೇದಿಕೆ, ಕಚೇರಿ, ಕ್ರೀಡೆ, ಹಾಡು = ____________

೪. ಗೌರವ, ಮಾನ್ಯತೆ, ಆದರ, ತಿರಸ್ಕಾರ = ____________

**ಇ. ಕೊಟ್ಟಿರುವ ಪದ ಗಮನಿಸಿ ವಿರುದ್ಧಾರ್ಥಕ ಪದ ಬರೆಯಿರಿ.**

ಸಹಾಯ × ____________

ಶಾಂತಿ × ____________

ಜ್ಞಾನ × ____________

ಆಸಕ್ತಿ × ____________

ಪುರಸ್ಕಾರ × ____________



**ಈ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಭೀಮಸೇನ ಜೋಶಿಯವರು ಸಂಗೀತ ಕಚೇರಿಯನ್ನು ಹೇಗೆ ನಡೆಸುತ್ತಿದ್ದರು?

____________________________________________

____________________________________________

____________________________________________

೨. ಮೌಲಾನಾರವರ ಬಾಲ್ಯದ ಆಟಗಳು ಹೇಗಿದ್ದವು ?

____________________________________________

____________________________________________

____________________________________________

೩. ಮೌಲಾನಾ ಮತ್ತು ಭೀಮಸೇನರಿಗೆ ದೊರೆತ ಪ್ರಶಸ್ತಿ ಯಾವುದು ? ಏಕೆ ?

____________________________________________

____________________________________________

____________________________________________

೪. ಭಾರತ ಸರಕಾರ ಆಜಾದರ ಹುಟ್ಟಿದ ದಿನವನ್ನು ಯಾವ ದಿನವನ್ನಾಗಿ ಆಚರಿಸುತ್ತಿದೆ?

________________________________

________________________________

________________________________

೫. ಮಕ್ಕಳೇ, ಮುಂದೆ ನೀವೇನಾಗಬೇಕೆಂದು ಬಯಸುವಿರಿ ?

________________________________

________________________________

________________________________

೬. ಭೀಮಸೇನ ಜೋಶಿ ಮತ್ತು ಮೌಲಾನಾ ಆಜಾದ್‌ರವರಲ್ಲಿ ನೀವು ಮೆಚ್ಚುವ ಗುಣಗಳಾವುವು ?

________________________________

________________________________

________________________________

## ಭಾಷಾಭ್ಯಾಸ

**1. ಕೊಟ್ಟಿರುವ ಪದ ಬಳಸಿ ಸ್ವಂತ ವಾಕ್ಯ ಬರೆಯಿರಿ.**

೧. ಆಸಕ್ತಿ : ________________

೨. ಭಾಷಣ : ________________

೩) ಪುರಸ್ಕಾರ : ________________

೪) ಗೌರವ : ________________



## ಭಾಷಾ ಚಟುವಟಿಕೆಗಳು

**೧. ಕೆಳಗಿನ ಪದಗಳ ಬಿಟ್ಟು ಹೋದ ಅಕ್ಷರವನ್ನು ಚೌಕದಲ್ಲಿ ಬರೆಯಿರಿ. ಅವುಗಳಿಂದ ರಚಿಸಬಹುದಾದ ಪದಗಳನ್ನು ಕೆಳಗೆ ಬರೆಯಿರಿ :**

| | ಸಿಂ | |
|---|---|---|
| ಬಂ | | ರ |
| | ರ | |

| | ಮಾ | |
|---|---|---|
| ದಾ | | ವ |
| | ವ | |

| | ಸಂ | |
|---|---|---|
| ಆ | | ತ್ತು |
| | ತ್ತು | |

________________ ________________ ________________

________________ ________________ ________________

## ೨. ಪದ ರಚಿಸುವ ಆಟ :

ಒಬ್ಬ ಮಹಾನ್ ವ್ಯಕ್ತಿಯ ಅಥವಾ ತಮ್ಮ ಹೆಸರನ್ನೇ ಬರೆದು ಹೆಸರುಗಳಲ್ಲಿರುವ ಅಕ್ಷರಗಳನ್ನು ಜೋಡಿಸಿ ಪದಗಳನ್ನು ರಚಿಸುವುದು. ಆಟದ ವಿಧಾನ : ಎರಡು ಗುಂಪಿಗೆ ಎರಡು ಹೆಸರುಗಳನ್ನು ಬರೆದ ಕಾರ್ಡ್‌ಗಳನ್ನು ಕೊಡುವುದು. ಹೆಚ್ಚು ಪದ ರಚನೆ ಮಾಡಿದ ತಂಡವು ಜಯಗಳಿಸುವುದು. ಹೆಸರು ದೊಡ್ಡದಾಗಿರಬೇಕು. ಮಾದರಿಯಂತೆ ಬರೆಯಿರಿ.

**ಮಾದರಿ :**

| ಪಂಡಿತ ಭೀಮಸೇನ ಜೋಶಿ |
|---|
| ಪಂಡಿತ, ಪಂತ, ಮನ, ಸೇನ, ಮತ, ಭೀಮ, ಮಶಿ |

೧. ವಿನಾಯಕ ಕೃಷ್ಣ ಗೋಕಾಕ

೨. ಶಿವರಾಮ ಕಾರಂತ

**ಪದರಚನೆ :**

**ಶಬ್ದದ ಆರಂಭದ ಅಕ್ಷರ ಬೇರೆಯಾಗಿದ್ದು ಉಳಿದ ಎರಡು ಅಕ್ಷರಗಳು ಒಂದೇ ರೀತಿಯಾಗಿರುತ್ತವೆ. ಇಲ್ಲಿ ಕೊಟ್ಟಿರುವ 'ಸುಳಿವು' ಸಹಾಯ ಪಡೆದುಕೊಂಡು ಪದಗಳನ್ನು ರಚಿಸಿರಿ :**

| ಅ.ನಂ | | | | ಸುಳಿವು | ಉತ್ತರಗಳು |
|---|---|---|---|---|---|
| ಮಾದರಿ | ಕೊ | ರ | ಳು | ಕುತ್ತಿಗೆ | ಕೊರಳು |
| ೧ | | ರ | ಳು | ಉಸುಕು | |
| ೨ | | ರ | ಳು | ಹೋಗು | |
| ೩ | | ರ | ಳು | ಪ್ರತಿಬಿಂಬ | |
| ೪ | | ರ | ಳು | ಬಾಣ | |
| ೫ | | ರ | ಳು | ಜಡೆ | |
| ೬ | | ರ | ಳು | ರುಬ್ಬುವ ಕಲ್ಲು | |
| ೭ | | ರ | ಳು | ಸಿಟ್ಟಿಗೇಳು | |
| ೮ | | ರ | ಳು | ಯಾತನೆ, ನೋವು | |



## ಅಭ್ಯಾಸ ಚಟುವಟಿಕೆಗಳು

೧. ದಿನಪತ್ರಿಕೆಗಳಲ್ಲಿ ಬರುವ ಸಾಧಕರ ಜೀವನ ಚರಿತ್ರೆಗಳನ್ನು ಸಂಗ್ರಹಿಸಿ. ಚಿತ್ರಸಂಪುಟ(ಆಲ್ಬಮ್) ತಯಾರಿಸಿರಿ.

೨. ನಿಮ್ಮ ಬಾಲ್ಯದ ವಿಶೇಷ ಘಟನೆಯೊಂದನ್ನು ಬರೆಯಿರಿ.

೩. ಪಂಚತಂತ್ರ, ಅಕ್ಬರ್-ಬೀರಬಲ್‌ನ ಕಥೆ, ತೆನಾಲಿರಾಮಕೃಷ್ಣನ ಕಥೆ, ಈಸೋಪನ ಕಥೆ, ಭಾರತ-ಭಾರತಿ ಪುಸ್ತಕ ಸಂಪದದ ಕಥೆಗಳನ್ನು ಓದಿ ಕಥೆ ಹೇಳಿರಿ.

೪. ಸಾರ್ವಜನಿಕ ಸ್ಥಳಗಳಲ್ಲಿ ನೀವು ಗಮನಿಸಿದ ಸೂಚನೆಗಳನ್ನು ಪಟ್ಟಿಮಾಡಿರಿ.

## ವ್ಯಾಕರಣ ಮಾಹಿತಿ

- **ಗುಣಿತಾಕ್ಷರಗಳು :** ವ್ಯಂಜನಗಳಿಗೆ ಸ್ವರಗಳು ಸೇರಿ ಆಗುವ ಅಕ್ಷರಗಳು.

**೧. ಇಲ್ಲಿನ ಅಕ್ಷರಗಳನ್ನು ಗಮನಿಸಿರಿ.**

| ಕ್+ಅ=ಕ | ಕ್+ಆ=ಕಾ | ಕ್+ಇ=ಕಿ | ಕ್+ಈ=ಕೀ | ಕ್+ಉ=ಕು |
|---|---|---|---|---|
| ಕ್+ಊ=ಕೂ | ಕ್+ಋ=ಕೃ | ಕ್+ಎ=ಕೆ | ಕ್+ಏ=ಕೇ | ಕ್+ಐ=ಕೈ |
| ಕ್+ಒ=ಕೊ | ಕ್+ಓ=ಕೋ | ಕ್+ಔ=ಕೌ | ಕ್+ಂ=ಕಂ | ಕ್+ಃ=ಕಃ |

**೨. ಮಾದರಿಯಂತೆ ಕೆಳಗಿನ ಅಕ್ಷರಗಳನ್ನು ಬಿಡಿಸಿ ಬರೆಯಿರಿ.**

**ಮಾದರಿ :** ವಿಚಾರಿಸು = ವ್ + ಇ = ವಿ  ಚ್ + ಆ = ಚಾ

ರ್ + ಇ = ರಿ  ಸ್ + ಉ = ಸು

ಮಾಲೀಕ = ..........................................................................

**೩. ಮಾದರಿಯಂತೆ ಗುಣಿತಾಕ್ಷರಗಳನ್ನು ಕೂಡಿಸಿ ಬರೆಯಿರಿ.**

**ಮಾದರಿ :** ಆ + ಸ್ + ಅ + ಕ್ + ತ್ + ಇ = ಆಸಕ್ತಿ

ದ್ + ಇ + ಗ್ + ಗ್ + ಅ + ಜ್ + ಅ = ________________



---

## ಪದ್ಯಪಾಠ – ೫

# ಚಂದ್ರ

– ಅಂಬಿಕಾತನಯದತ್ತ

**ಪ್ರವೇಶ :** ವೈಜ್ಞಾನಿಕವಾಗಿ ಚಂದ್ರ ಭೂಮಿಯ ಉಪಗ್ರಹ. ಆದರೂ ಚಂದ್ರ ಕವಿಗಳಿಗೆ, ಮಕ್ಕಳಿಗೆ, ಆಕರ್ಷಣೀಯನಾದವನು. ಶುಕ್ಲಪಕ್ಷದ ಪಾಡ್ಯದಿಂದ ಬಿದಿಗೆ, ಚವತಿ, ಅಷ್ಟಮಿ ಹುಣ್ಣಿಮೆವರೆಗಿನ ಚಂದ್ರನ ಆಕಾರಗಳು ವಿವಿಧ ಕಲ್ಪನೆಗಳನ್ನು ಮೂಡಿಸುತ್ತವೆ. ಕವಿ ತನ್ನದೇ ಆದ ಕಲ್ಪನೆಯಲ್ಲಿ ಚಂದ್ರನ ಆಕಾರವನ್ನು ಕಂಡು ಬೇರೆ ಬೇರೆ ವಸ್ತುಗಳಿಗೆ ಕಲ್ಪಿಸಿ ಆನಂದಿಸುತ್ತಾನೆ.

**ಪೂರಕ ಚಟುವಟಿಕೆ :**

- ಚಂದ್ರನ ಆಕಾರಗಳು ನಿಮಗೆ ಹೇಗೆ ಕಾಣುತ್ತವೆ ?
- ಚಂದ್ರನ ಚಿತ್ರ ಬರೆದು ಬಣ್ಣ ತುಂಬಿರಿ.
- ಚಂದ್ರನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಿರಿ.
- ಗ್ರಹಣಗಳು ಹೇಗೆ ಉಂಟಾಗುತ್ತವೆ ಚರ್ಚಿಸಿರಿ.

ಪದ್ಯಪಾಠ – ೫

# ಚಂದ್ರ

ಬಿದಿಗೆ ಚಂದ್ರ ಬಂದ ನೋಡು
ದೀಪ ಹಚ್ಚಿದಂತೆ ಜೋಡು
ಯಾರ ಮನೆಯು ಅಲ್ಲಿ ಇಹುದೋ ಯಾರು ಬಲ್ಲರು?
ನೋಡಲೇನು, ಒಬ್ಬರೇನು ಹೇಳಲೊಲ್ಲರು

ಅಗೋ ಚವತಿ ಚಂದ್ರ ನೋಡು
ಮೂಡಿದಂತೆ ಎರಡು ಕೋಡು
ಮೃಗವು ಎಲ್ಲಿ ಇಹುದೋ ಏನೋ ನಾನು ಕಾಣೆನು
ಇಂಥ ಚಿತ್ರ ಬರೆದನಿಲ್ಲಿ ಯಾವ ಜಾಣನು ?

ಅಷ್ಟಮಿ ಚಂದ್ರ ಬಂದ
ಅರ್ಧ ಬಿಟ್ಟು ಅರ್ಧ ತಿಂದ
ಉಂಡಿ ಚೆಲ್ಲಿ ಕೊಟ್ಟನಿಲ್ಲಿ ಹುಡುಗನಾವನು ?
ಕಾಣೆ ಅತ್ತ ಇತ್ತ ಎತ್ತ ಅವನ ಠಾವನು

ಬಂದನೋ ಹುಣ್ಣಿಮೆಯ ಚಂದ್ರ
ಬೆಳದಿಂಗಳು ನಿಬಿಡ ಸಾಂದ್ರ
ಅಲ್ಲ ಅಲ್ಲ ಮುಗಿಲ ತುಂಬ ಇಹುದು ಮಜ್ಜಿಗೆ
ಬೆಣ್ಣೆ ಮುದ್ದೆ ಮೇಲೆಯೊಂದು ಹೇಳು ಅಜ್ಜಿಗೆ!



**ರವಿ ಕಾಣದ್ದನ್ನು ಕವಿ ಕಂಡ**



**ಕವಿ ಪರಿಚಯ :**

**ಅಂಬಿಕಾತನಯದತ್ತ** ಎನ್ನುವುದು ಡಾ. ದ. ರಾ. ಬೇಂದ್ರೆಯವರ ಕಾವ್ಯನಾಮ. ಇವರ ಪೂರ್ಣ ಹೆಸರು ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ಧಾರವಾಡದವರು. ಇವರ ಪ್ರಮುಖ ಕವನ ಸಂಕಲನಗಳು 'ಗರಿ, ಗಂಗಾವತರಣ, ಸಖೀಗೀತ, ಉಯ್ಯಾಲೆ' ಇತ್ಯಾದಿ. 'ನಾಕು ತಂತಿ' ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಈ ಕವನವನ್ನು **'ಅರಳು ಮರಳು'** ಎಂಬ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಈ ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ.

ಕ್ಷೇತ್ರ :– ಮಾತನಾಡುವುದು.

ಸಾಮರ್ಥ್ಯ :– ಸರಳ ಪ್ರಾಸ ಗೀತೆ, ಪದ್ಯ ಹಾಗೂ ಹಾಡುಗಳನ್ನು ಹಾವ ಭಾವ ಅಭಿನಯದ ಮೂಲಕ ಸಾಮೂಹಿಕ ಹಾಗೂ ವೈಯಕ್ತಿಕವಾಗಿ ಹಾಡುವುದು.

### ಓದಿ – ತಿಳಿಯಿರಿ :

ಜೋಡು – ಎರಡು, ಸಮ; ಚವತಿ – ಚೌತಿ, ಚತುರ್ಥಿ; ಕೋಡು – ಕೊಂಬು; ಮೃಗ – ಪ್ರಾಣಿ ಉಂಡಿ – ಉಂಡೆ; ಠಾವು – ಸ್ಥಳ; ಕಾಣೆ – ಕಾಣಲಿಲ್ಲ; ನಿಬಿಡ – ದಟ್ಟವಾದ; ಮಾಸ – ತಿಂಗಳು; ಅತ್ತ ಇತ್ತ ಎತ್ತ – ಅಲ್ಲಿ ಇಲ್ಲಿ ಎಲ್ಲೂ, ಎಲ್ಲೆಲ್ಲಿಯೂ.



### ಗಮನಿಸಿ – ತಿಳಿಯಿರಿ :

ಪಕ್ಷ – ಒಂದು ತಿಂಗಳಿಗೆ ಎರಡು ಪಕ್ಷಗಳು. ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ.

ತಿಥಿ – ಒಂದು ಪಕ್ಷಕ್ಕೆ ಹದಿನೈದು ತಿಥಿಗಳು. ಪಾಡ್ಯ, ಬಿದಿಗೆ, ತದಿಗೆ, ಚೌತಿ, ಪಂಚಮಿ, ಷಷ್ಠಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ, ಏಕಾದಶಿ, ದ್ವಾದಶಿ, ತ್ರಯೋದಶಿ, ಚತುರ್ದಶಿ, ಹುಣ್ಣಿಮೆ ಅಥವಾ ಅಮಾವಾಸ್ಯೆ.

ಮಾಸ – ಮೂವತ್ತು ದಿನಗಳ ಅವಧಿ, ತಿಂಗಳು.

## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಬಿದಿಗೆ ಚಂದ್ರ ಹೇಗೆ ಕಾಣಿಸುತ್ತಾನೆ ?

______________________________

೨. ಕೋಡು ಯಾವ ದಿನದ ಚಂದ್ರನಿಗೆ ಮೂಡಿದೆ ?

_______________

೩. ಅಷ್ಟಮಿ ಚಂದ್ರ ಕವಿಯ ಕಣ್ಣಿಗೆ ಹೇಗೆ ಕಾಣುತ್ತಾನೆ ?

_______________

೪. ಮುಗಿಲ ತುಂಬ ಏನು ಇರುವುದೆಂದು ಕವಿ ಕಲ್ಪಿಸುತ್ತಾನೆ ?

_______________

## ಆ. ಹೊಂದಿಸಿ ಬರೆಯಿರಿ :

| | ಅ | ಬ | |
|---|---|---|---|
| ೧. | ನಿಬಿಡ | ಅ) ತಿಂಗಳು | _______ |
| ೨. | ಕೋಡು | ಆ) ಸ್ಥಳ | _______ |
| ೩. | ಮೃಗ | ಇ) ದಟ್ಟವಾದ | _______ |
| ೪. | ಠಾವು | ಈ) ಕೊಂಬು | _______ |
| ೫. | ಮಾಸ | ಉ) ಪ್ರಾಣಿ | _______ |
| | | ಊ) ದಿನ | _______ |

## ಉ. ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿರಿ.

೧. ಯಾರ ಮನೆಯು ಅಲ್ಲಿ ಇಹುದೋ ಯಾರು ಬಲ್ಲರು ?

_______________

೨. ಮೃಗವು ಎಲ್ಲಿ ಇಹುದೋ ಏನೋ ನಾನು ಕಾಣೆನು ?

_______________

೩. ಉಂಡಿ ಚೆಲ್ಲಿ ಕೊಟ್ಟನಿಲ್ಲಿ ಹುಡುಗನಾವನು ?

_______________

೪. ಅಲ್ಲ ಅಲ್ಲ ಮುಗಿಲ ತುಂಬ ಇಹುದು ಮಜ್ಜಿಗೆ.

_______________

## ಈ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕವಿ ಯಾವ ಯಾವ ದಿನದ ಚಂದ್ರನನ್ನು ಯಾವ ಯಾವ ವಸ್ತುಗಳಿಗೆ ಹೋಲಿಸಿದ್ದಾರೆ?

________________________________________

________________________________________

________________________________________

೨. ಚಂದ್ರನ ಬಗ್ಗೆ ನಿಮಗೆ ಗೊತ್ತಿರುವುದನ್ನು ಬರೆಯಿರಿ.

________________________________________

________________________________________

________________________________________

೩. ಈ ಪದ್ಯದಲ್ಲಿ ನಿಮಗೆ ಮೆಚ್ಚುಗೆಯಾಗುವ ಸಂಗತಿಗಳನ್ನು ತಿಳಿಸಿರಿ.

________________________________________

________________________________________

________________________________________



## ಭಾಷಾಭ್ಯಾಸ

## ಮಾದರಿಯಂತೆ ಕೊಟ್ಟಿರುವ ಅಕ್ಷರಗಳನ್ನು ಬಳಸಿ ಅರ್ಥಪೂರ್ಣ ಪದ ರಚಿಸಿರಿ :

**ಮಾದರಿ :**

| ಣ್ಣಿ | ಮೆ | ಹು | | | → ಹುಣ್ಣಿಮೆ |
|---|---|---|---|---|---|
| ದಿ | ಗೆ | ಬಿ | | | ____________ |
| ತಿ | ಚ | ವ | | | ____________ |
| ಅ | ಮಿ | ಷ್ಟ | | | ____________ |
| ಳು | ಬೆ | ದಿಂ | ಳ | ಗೆ | ____________ |

೪. ನೀವು ಆರೋಗ್ಯವಾಗಿರಲು ಯಾವ ಯಾವ ಕ್ರಮಗಳನ್ನು ಅನುಸರಿಸುವಿರಿ ?

______________________________

______________________________

______________________________

## ಅಭ್ಯಾಸ ಚಟುವಟಿಕೆ

೧. ವೈದ್ಯ ಮತ್ತು ರೋಗಿಯ ನಡುವಿನ ಸಂಭಾಷಣೆಯನ್ನು ಅಭಿನಯಿಸಿರಿ.

೨. ಈ ಗದ್ಯಭಾಗವನ್ನು ನಾಟಕ ರೂಪದಲ್ಲಿ ಅಭಿನಯಿಸಿರಿ.

೩. ಹಣ್ಣು ತರಕಾರಿಗಳ ಬಗ್ಗೆ ಇರುವ ಗೀತೆಗಳನ್ನು ಸಂಗ್ರಹಿಸಿ ಹಾಡಿರಿ.

೪. ದಿನವೂ ಸೂರ್ಯನಮಸ್ಕಾರ, ಯೋಗಾಸನ ಮಾಡಿರಿ.

## ಭಾಷಾಭ್ಯಾಸ

### ಅ. ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ.

ಶರೀರ ______________________________

ಸ್ವಚ್ಛ ______________________________

### ಆ. ಕೆಳಗಿನ ಪದಗಳಿಗೆ ಮಾದರಿಯಂತೆ ವಿರುದ್ಧಾರ್ಥಕ ಪದ ಬರೆಯಿರಿ.

**ಮಾದರಿ :** ಅವಶ್ಯಕ × ಅನವಶ್ಯಕ

೧. ಬೇಗ × ____________ ೨. ಜೀರ್ಣ × ____________

೩. ಸರಳ × ____________ ೪. ಶಬ್ದ × ____________

### ಇ. ಕೆಳಗಿನ ಪದಗಳನ್ನು ಮಾದರಿಯಂತೆ ಬಿಡಿಸಿ ಬರೆಯಿರಿ.

**ಮಾದರಿ :** ಸೂರ್ಯೋದಯ = ಸೂರ್ಯ + ಉದಯ

೧. ರೋಗವಿಲ್ಲ = ________ ೨. ಆಹಾರವನ್ನು = ________

೩. ಶಕ್ತಿಯನ್ನು = ________ ೪. ಆಸನಗಳಿವೆ = ________

## ಭಾಷಾ ಚಟುವಟಿಕೆ

**ಇದರಲ್ಲಿರುವ ತರಕಾರಿಗಳ ಹೆಸರುಗಳನ್ನು ಪತ್ತೆ ಹಚ್ಚಿ, ಎಡಕ್ಕೂ, ಬಲಕ್ಕೂ, ಮೇಲಕ್ಕೂ, ಕೆಳಕ್ಕೂ, ಓರೆಯಾಗಿಯೂ, ಅಕ್ಷರಗಳಲ್ಲಿ ಮಾದರಿಯಂತೆ ಜೋಡಿಸಿರಿ.**

| ಟ | ಹೂ | ಕೋ | ಸು | ಲ | ಸೌ | ಡ | ಕ್ಯಾ | ರೆ | ಟ್ | ಪ |
|---|---|---|---|---|---|---|---|---|---|---|
| ಪ | ಮೂ | ಎ | ಸ | ತೊಂ | ತೆ | ಕು | ಪ | ಮೂ | ಸ | ಡ |
| ತ | ಗ | ಟೋ | ಬೆಂ | ಡೆ | ಕಾ | ಯಿ | ತ | ಲಂ | ಡ | ವ |
| ಹಾ | ಡ | ಲ | ಪ | ಕಾ | ಯಿ | ಜ | ರ | ಗಿ | ವ | ಲ |
| ಲ | ಗ | ಮ | ಸೌ | ಯಿ | ರೆ | ಜ | ಕ | ಪ | ಲ | ಕಾ |
| ಹಾ | ರ | ಲ | ಪಿ | ಮಿ | ಮೆ | ಣ | ಸಿ | ನ | ಕಾ | ಯಿ |
| ಗ | ನು | ಗ್ಗೇ | ಕಾ | ಯಿ | ಸು | ನ | ವಿ | ಲು | ಕೋ | ಸು |

## ವ್ಯಾಕರಣ ಮಾಹಿತಿ

### ಲೇಖನ ಚಿಹ್ನೆ – ಅಭ್ಯಾಸ ಚಟುವಟಿಕೆ

**'ಅ' ಪಟ್ಟಿಯಲ್ಲಿರುವ ಲೇಖನ ಚಿಹ್ನೆಗಳಿಗೆ 'ಬ' ಪಟ್ಟಿಯಲ್ಲಿರುವ ಹೆಸರುಗಳನ್ನು ಹೊಂದಿಸಿ ಬರೆಯಿರಿ.**

| | 'ಅ' | 'ಬ' | ಹೊಂದಿಸಿದ್ದು |
|---|---|---|---|
| ೧. | ! | ಅ) ಅರ್ಧವಿರಾಮ | ________ |
| ೨. | ? | ಆ) ಅಲ್ಪವಿರಾಮ | ________ |
| ೩. | . | ಇ) ಆಶ್ಚರ್ಯಸೂಚಕ | ________ |
| ೪. | ; | ಈ) ಪ್ರಶ್ನಾರ್ಥಕ | ________ |
| ೫. | , | ಉ) ಪೂರ್ಣವಿರಾಮ | ________ |

## ಪದ್ಯಪಾಠ–೫

# ಡೊಳ್ಳುಹೊಟ್ಟೆ ಗುಂಡ

– ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

**ಪ್ರವೇಶ :**

ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಸಾಹಿತ್ಯಕ್ಕೆ ಅಗ್ರಸ್ಥಾನವಿದೆ. ನಗುವು ಸಹಜ ಧರ್ಮ; ನಗಿಸುವುದು ಪರಧರ್ಮ ಎಂಬಂತೆ ಎಲ್ಲರ ಮನಸ್ಸನ್ನು ಹಾಸ್ಯವು ಮುದಗೊಳಿಸುತ್ತದೆ. ಹಾಸ್ಯವು ಮಾನವನ ಚಿಂತೆಯನ್ನು ಕ್ಷಣಮಾತ್ರದಲ್ಲಿ ದೂರ ಮಾಡಿ ಮನಸ್ಸನ್ನು ಉಲ್ಲಸಿತವಾಗಿಯೂ ಹಾಗೂ ಆರೋಗ್ಯವಾಗಿಯೂ ಇಡುತ್ತದೆ.

**ಪೂರಕ ಚಟುವಟಿಕೆ :**

- ಹಾಸ್ಯ ಎಲ್ಲರಿಗೂ ಇಷ್ಟವಾಗಲು ಕಾರಣ ತಿಳಿಸಿರಿ.
- ನಿಮಗೆ ಗೊತ್ತಿರುವ ಹಾಸ್ಯ ಕತೆಯನ್ನು ಹೇಳಿರಿ, ಹಾಸ್ಯ ಕವನಗಳನ್ನು ಹಾಡಿರಿ.
- ನಿಮಗೆ ತುಂಬಾ ನಗೆ ಬರಿಸಿದ ಪ್ರಸಂಗಗಳನ್ನು ಹೇಳಿರಿ.
- ಹಾಸ್ಯ ಕಲಾವಿದರು, ಹಾಸ್ಯ ಸಾಹಿತಿಗಳನ್ನು ಹೆಸರಿಸಿರಿ.



ಡೊಳ್ಳುಹೊಟ್ಟೆ ಗುಂಡ
ತಿಂಡಿ ತಿನ್ನೋಕ್ ಬಂದ
ಹಸಿವು ಇಲ್ಲ ನಂಗೆ
ಚೂರೇ ತಿಂತೀನ್ ಅಂದ



ಒಂದು ತಟ್ಟೆ ಉಪ್ಪಿಟ್ಟು
ಎರಡೇ ನಿಮಿಷ, ಢಂ!
ಮೂರೇ ದೋಸೆ, ನಾಕೇ ರೊಟ್ಟಿ
ಐದೇ ಇಡ್ಲಿ ಢಂ

ಆರು ವಡೆ ಢಂ
ಏಳು ಉಂಡೆ ಢಂ
ಎಂಟೊ, ಒಂಬತ್ತೋ ಪೂರಿ ಅಷ್ಟೆ
ಢಂ ಢಂ ಢಂ

ಒಂದು ಲೀಟರ್ ಹಾಲು ಕುಡಿದು
ಗುಂಡ ಎದ್ದೇಬಿಟ್ಟ
ಯಾಕೋ ತಿಂಡಿ ಸೇರ್ತಿಲ್ಲಾಂತ
ತುಂಬ ದುಃಖಪಟ್ಟ!

ಜೈ ಜೈ ಜೈ
ತಿಂಡಿಪೋತ ಗುಂಡ
ಎಂಥ ಹೊಟ್ಟೆಬಾಕ ಬಂದ್ರೂ
ಗುಂಡನ ಎದುರು ದಂಡ.!

***ನಗುವೇ ಆರೋಗ್ಯಕ್ಕೆ ಸೋಪಾನ. ನಗುವೇ ಆರೋಗ್ಯದ ಗುಟ್ಟು.***

**ಕವಿ ಪರಿಚಯ :**



ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಶಿವಮೊಗ್ಗದವರು. ಇವರ 'ಹೊರಳು ಹಾದಿಯಲ್ಲಿ', 'ಕಾವ್ಯ ನಂದನ', 'ಚಿನ್ನದ ಹಕ್ಕಿ', ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ಲಭಿಸಿದೆ. ಅಲ್ಲದೆ ಕಾರಂತ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಆರ್ಯಭಟ' ಪ್ರಶಸ್ತಿಗಳು ಲಭಿಸಿವೆ. ಈ ಕವನವನ್ನು ಅವರ 'ಸಮಗ್ರ ಕಾವ್ಯ ಸಂಪುಟ' ಸಂಕಲನದಿಂದ ಆರಿಸಲಾಗಿದೆ.



ಕ್ಷೇತ್ರ : ಓದುವುದು.
ಸಾಮರ್ಥ್ಯ : ೧೫೦೦ ಪದಗಳನ್ನು ಓದಿ ಗ್ರಹಿಸುವುದು.

## ಓದಿ – ತಿಳಿಯಿರಿ :

ಥಂಡ – ಗರಬಡಿದವ; ಡೊಳ್ಳುಹೊಟ್ಟೆ – ದಪ್ಪ ಹೊಟ್ಟೆಯವ

## ಗಮನಿಸಿ – ತಿಳಿಯಿರಿ :

ಹೊಟ್ಟೆಬಾಕ – ಹೆಚ್ಚು ತಿಂಡಿ ತಿನ್ನುವವನು, ತಿಂಡಿಪೋತ.
ವಡೆ – ಕಡಲೆಬೇಳೆ ಅಥವಾ ಉದ್ದಿನ ಬೇಳೆಯಿಂದ ತಯಾರಿಸಿದ ಕರಿದ ತಿಂಡಿ.
ಉಂಡೆ – ರವೆ, ತೆಂಗಿನಕಾಯಿ ಅಥವಾ ಗೋದಿಹಿಟ್ಟು, ಬೆಲ್ಲ ಅಥವಾ ಕಡಲೆ ಹಿಟ್ಟು, ಬೆಲ್ಲದಿಂದ ತಯಾರಿಸಿದ ಸಿಹಿ ತಿಂಡಿ.
ಲೀಟರ್ – ದ್ರವ ವಸ್ತುಗಳ ಅಳೆಯುವ ಸಾಧನ.

## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಗುಂಡನ ಹೊಟ್ಟೆ ಹೇಗಿದೆ?

______________________________

೨. ಗುಂಡ ಏತಕ್ಕಾಗಿ ಬಂದನು?

______________________________

೩. ಗುಂಡ ಎಷ್ಟು ಲೀಟರ್ ಹಾಲು ಕುಡಿದನು?

______________________________

೪. ಗುಂಡನಿಗೆ ಏನೆಂದು ಕರೆಯುವರು?

______________________________

### ಆ. ಪದ್ಯದಲ್ಲಿ ಬಿಟ್ಟಿರುವ ಮುಂದಿನ ಸಾಲುಗಳನ್ನು ಬರೆಯಿರಿ.

ಒಂದು ತಟ್ಟೆ ______________

______________________

______________________

ಐದೇ ಇಡ್ಲಿ ಢಂ

______________________

______________________

______________________

ಢಂ ಢಂ ಢಂ

### ಇ. ಕೆಳಗಿನ ಪದಗಳಲ್ಲಿ ಪ್ರಾಸಪದಗಳನ್ನು ಗುರುತಿಸಿ ಬರೆಯಿರಿ.

ಬಂದ, ಬಿಟ್ಟ, ಪಟ್ಟ, ಥಂಡ, ಅಂದ, ಗುಂಡ

೧. ____________ ೨. ____________ ೩. ____________

## ಈ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಗುಂಡನನ್ನು ಕವಿ ತಿಂಡಿಪೋತ ಎಂದು ಏಕೆ ಕರೆಯುತ್ತಾರೆ?

೨. ಗುಂಡನ ಎದುರು ಎಲ್ಲರೂ ಏಕೆ ಥಂಡ ಆಗುವರು?

೩. ಈ ಪದ್ಯದಲ್ಲಿ ನಿಮಗಿಷ್ಟವಾದ ಸಂಗತಿ ಯಾವುದು?

೪. ನಿಮಗಿಷ್ಟವಾದ ತಿಂಡಿಗಳ ಹೆಸರನ್ನು ಪಟ್ಟಿಮಾಡಿರಿ.

## ಭಾಷಾಭ್ಯಾಸ

**ಅ. ಮಾದರಿಯಂತೆ ಕೆಳಗೆ ಕೊಟ್ಟಿರುವ ಪದಗಳಿಂದ ಅರ್ಥಪೂರ್ಣ ವಾಕ್ಯ ರಚಿಸಿರಿ.**

**ಮಾದರಿ :** ಲತಾ ಹೂವು ಮಾರಿದಳು

| | | |
|---|---|---|
| ಲತಾ | | ತಂದನು |
| ಅಕ್ಕ | ರೊಟ್ಟಿ | ತಿಂದಳು |
| ಗೀತಾ | ಹೂವು | ತಿಂದನು |
| ಶೇಖರ | ಹಣ್ಣು | ಮಾರಿದಳು |
| ರಾಜು | | ಮಾಡಿದಳು |

೧. ____________________

೨. ____________________

೩. ____________________

೪. ____________________

೫. ____________________

**ಆ. ಮಾದರಿಯಂತೆ ಕೊಟ್ಟಿರುವ ಅಕ್ಷರಗಳಿಂದ ಹೊಸ ಪದ ರಚಿಸಿರಿ.**

**ಮಾದರಿ :** ಕಾರು

ಕೋ
ಡು ಕೂ ಸು
ಲು ಕಾ ಹಾ
ರು

| | | |
|---|---|---|
| ೧. ________ | ೨. ________ | ೩. ________ |
| ೪. ________ | ೫. ________ | ೬. ________ |
| ೭. ________ | ೮. ________ | ೯. ________ |
| ೧೦. ________ | ೧೧. ________ | ೧೨. ________ |

## ಇ. ಮಾದರಿಯಂತೆ ಬರೆಯಿರಿ.

| | | | | |
|---|---|---|---|---|
| ಮಾದರಿ : ಕೇಳು | – | ಕೇಳಿದ | – | ಕೇಳಿದನು |
| ನೋಡು | – | ______ | – | ______ |
| ಬರೆ | – | ______ | – | ______ |
| ಓದು | – | ______ | – | ______ |
| ಹಾಡು | – | ______ | – | ______ |

## ಈ. ಮಾದರಿಯಂತೆ ಕೊಟ್ಟಿರುವ ಪದಗಳಿಂದ ಹೊಸ ಪದಗಳನ್ನು ರಚಿಸಿರಿ.

**ಮಾದರಿ :** ಶಿಖರ = ಶಿರ, ಶಿಖ

೧. ನೇಸರ = ________ ________

೨. ನಗರ = ________ ________

೩. ಅಂತರಂಗ = ________ ________

೪. ಸಂಗೀತ = ________ ________



### ಭಾಷಾ ಚಟುವಟಿಕೆ

## 1. ಕೆಳಗೆ ಕೊಟ್ಟಿರುವ ಪದಗಳನ್ನು ತಪ್ಪಾಗದಂತೆ ಸರಸರನೆ ಹಲವು ಬಾರಿ ಹೇಳಿರಿ.

೧. ಲಾರಿ ರೈಲು ; ರೈಲು ಲಾರಿ

೨. ಕಪ್ಪು ಕುಂಕುಮ ; ಕೆಂಪು ಕುಂಕುಮ

೩. ಬಿಳಿ ಹಲ್ಲು ; ಹುಳುಕು ಹಲ್ಲು

೪. ಕರ್ರನೆ ಕಾಗೆಯೊಂದು ಸರ್ರನೆ ಮೇಲೆ ಏರಿ, ಪುರ್ರೆಂದು ಹಾರಿಹೋಯಿತು.

೫. ಅಪ್ಪ ಸೊಪ್ಪು ತಿಂದು ಗಪ್ಪು ಕೂತ.

### ಅಭ್ಯಾಸ ಚಟುವಟಿಕೆ

೧. ಡೊಳ್ಳು ಹೊಟ್ಟೆ ಗುಂಡನ ಪದ್ಯವನ್ನು ಅಭಿನಯಿಸುತ್ತಾ ಹಾಡಿರಿ.

೨. "ಆಚೆ ಮನೆ ಸುಬ್ಬಮ್ಮನಿಗೆ", "ಅಮ್ಮಾ ಅಮ್ಮಾ ಒಂದೇ ಒಂದು ಉಂಡೆ ಕೊಡ್ತೀಯಾ?" ಮುಂತಾದ ಹಾಸ್ಯದ ಶಿಶುಗೀತೆಗಳನ್ನು ಕೇಳಿ, ಹೇಳಿ, ಅಭಿನಯಿಸಿ, ಆನಂದಿಸಿರಿ.

೩. ವಿವಿಧ ಕವಿಗಳ ಹಾಸ್ಯ ಚುಟುಕುಗಳನ್ನು ಸಂಗ್ರಹಿಸಿ ಓದಿರಿ.

# ಗದ್ಯಪಾಠ – ೬

# ನಂದಿವಿಶಾಲ

**ಪ್ರವೇಶ :**

ವ್ಯಕ್ತಿತ್ವ ವಿಕಸನದಲ್ಲಿ ವಿನಯದ ನಡವಳಿಕೆ, ಶಿಷ್ಟಾಚಾರ ಬಹಳ ಮುಖ್ಯವಾದುದು. ಮೃದುವಾದ ಮಾತಿನಿಂದ ಮೂರುಲೋಕ ಗೆಲ್ಲಬಹುದು. ಮಾತೇ ಮುತ್ತು; ಮಾತೇ ಮೃತ್ಯು. ಅಹಂಕಾರದಿಂದ ಕಠೋರವಾಗಿ ಮಾತನಾಡಿದರೆ, ಮಾನವೀಯ ಸಂಬಂಧ ಕೆಡುತ್ತದೆ. ವಿನಯಪೂರ್ವಕವಾಗಿ ಮಾತನಾಡಬೇಕು. ಗೌರವ ಕೊಟ್ಟು, ಗೌರವ ಪಡೆದುಕೊಳ್ಳಬೇಕು.

**ಪೂರಕ ಚಟುವಟಿಕೆ :**

- ಮನೆಯ ಹಿರಿಯರೊಂದಿಗೆ ಮತ್ತು ಶಾಲೆಯಲ್ಲಿ ಗುರುಗಳೊಂದಿಗೆ ಹೇಗೆ ಮಾತನಾಡುವಿರಿ ?
- ನಿಮಗೆ ಕೆಲವರ ಮಾತುಗಳನ್ನು ಮತ್ತೆ ಮತ್ತೆ ಕೇಳಬೇಕೆಂದೂ ಹಾಗೂ ಕೆಲವರ ಮಾತುಗಳನ್ನು ಕೇಳಬಾರದೆಂದು ಅನಿಸಲು ಕಾರಣವೇನು ?
- ಮಾತು ಬೆಳ್ಳಿ ಮೌನ ಬಂಗಾರ ಎಂದರೇನು ?

ನಂದಿವಿಶಾಲ ಎಂಬ ಹೆಸರಿನ ಎತ್ತು ಒಬ್ಬ ಗುರುವಿನ ಬಳಿ ಇತ್ತು. ಅವರು ಎತ್ತನ್ನು ದಾನವಾಗಿ ಪಡೆದಿದ್ದರು. ಗುರುಗಳು ಅದನ್ನು ಪ್ರೀತಿಯಿಂದ ಬಲಿಷ್ಠವಾಗಿ ಬೆಳೆಸಿದ್ದರು. ನಂದಿವಿಶಾಲನಿಗೆ ಗುರುಗಳನ್ನು ಕಂಡರೆ ಬಲು ಭಕ್ತಿ. ನನ್ನನ್ನು ಬೆಳೆಸಿ, ಸಾಕಿ, ಸಲಹಿ ದೊಡ್ಡವನನ್ನಾಗಿ ಮಾಡಿದ ಗುರುಗಳಿಗೆ ಏನಾದರೂ ಉಪಕಾರ ಮಾಡಬೇಕೆಂದುಕೊಂಡಿತು. ನಂದಿವಿಶಾಲ ಒಂದು ದಿನ ತನ್ನ ಒಡೆಯನಿಗೆ ಹೀಗೆ ಹೇಳಿತು.



ನಂದಿವಿಶಾಲ : "ಒಡೆಯಾ, ನೀನು ಈ ಊರಿನ ಶ್ರೀಮಂತನಾದ ಧನಶೆಟ್ಟಿ ಬಳಿಗೆ ಹೋಗು. ಅವರಿಗೆ ನನ್ನ ಎತ್ತು ಹೊರೆತುಂಬಿದ ಹತ್ತು ಬಂಡಿಗಳನ್ನು ಎಳೆಯುವುದಾಗಿ ಹೇಳಿ ಒಂದು ಸಾವಿರ ಹೊನ್ನಿನ ನಾಣ್ಯಗಳ ಪಂಥ ಕಟ್ಟಿ ಬಾ".

ಗುರುಗಳು : (ಅನುಮಾನದಿಂದ) "ಪಂಥ ಕಟ್ಟಿದರೆ ನಾನು ಗೆಲ್ಲಲು ಸಾಧ್ಯವೇ?".

ನಂದಿವಿಶಾಲ : "ಅಂದ್ರಾ..... ಒಡೆಯನೇ ಸಂದೇಹ ಪಡಬೇಡಾ" [ಗುರುಗಳಿಗೆ ಎತ್ತು ಮಾತನಾಡಿದ್ದೆ ಆಶ್ಚರ್ಯ ಉಂಟುಮಾಡಿತ್ತು. ನಂದಿವಿಶಾಲ ಹತ್ತು ಗಾಡಿಗಳನ್ನು ಎಳೆಯಬಹುದೆಂಬ ವಿಶ್ವಾಸದಿಂದ ಧನಶೆಟ್ಟಿ ಮನೆಗೆ ಗುರುಗಳು ಬಂದರು.]

ಧನಶೆಟ್ಟಿ : "ಏನು ಸಮಾಚಾರ.... ಮಧ್ಯಾಹ್ನ ಬಂದಿದ್ದೀರಿ! ಬನ್ನಿ.... ಊಟ ಮಾಡುವಿರಂತೆ. ಕೈ ತೊಳೆಯಿರಿ".

ಗುರುಗಳು : "ಊಟ ಮಾಡಿಯೇ ಬಂದೆ ಸಾಹುಕಾರರೇ.... ನನ್ನ ಬಳಿ ಒಂದು ಬಲಶಾಲಿಯಾದ ಎತ್ತು ಇದೆ. ಅದು ಹೊರೆತುಂಬಿದ ಹತ್ತು ಗಾಡಿಗಳನ್ನು ಎಳೆಯಬಲ್ಲದು! ಬೇಕಿದ್ದರೆ ಪರೀಕ್ಷಿಸಿರಿ, ಸಾವಿರ ಹೊನ್ನಿನ ನಾಣ್ಯದ ಪಂಥ ಇಡೋಣ".

ಧನಶೆಟ್ಟಿ : "ಏನು ಗುರುವರ್ಯರೇ!... ತಮಾಷೆ ಮಾಡುತ್ತಿಲ್ಲ ತಾನೆ? ನೀವು ಹೇಳಿದಂತೆ ಪಂಥ ನಡೆಯಲಿ" [ಸ್ಪರ್ಧೆಯ ದಿನ ಹತ್ತು ಗಾಡಿಗಳಲ್ಲಿ ಮೂಟೆಗಳನ್ನು ತುಂಬಿಸಿ ಸಿದ್ಧಗೊಳಿಸಲಾಯಿತು]

ಗುರುಗಳು : [ಮೊದಲನೆ ಬಂಡಿ ಏರಿ ನಿಂತ ಗುರುಗಳಿಗೆ ಸಾವಿರ ಹೊನ್ನಿನ ನಾಣ್ಯದ ಒಡೆಯನಾಗುತ್ತೇನೆಂಬ ಅಹಂಕಾರ ಉಂಟಾಯಿತು. ಏರು ಧ್ವನಿಯಲ್ಲಿ] "ಏಯ್! ನಂದಿವಿಶಾಲ...., ನನ್ನ ಮನೆಯ ಆಹಾರ ತಿಂದು ಕೊಬ್ಬಿದ್ದೀಯಾ.... ಗಾಡಿಗಳನ್ನು ಎಳೆಯುತ್ತೇನೆಂದು ಹೇಳಿದ್ದೆ...., ಎಳೆ ಬೇಗ....". [ಎಂದು ಬಾರುಕೋಲಿನಿಂದ ಹೊಡೆದರು.
ತನ್ನ ಒಡೆಯ ಜನರಮುಂದೆ ಅನವಶ್ಯಕವಾಗಿ, ಹೀನಾಯವಾಗಿ ಬೈದನಲ್ಲಾ ಎಂದು ನಂದಿವಿಶಾಲನಿಗೆ ಕೋಪಬಂದಿತು. ಅದಕ್ಕೆ ಅದು ಒಂದು ಹೆಜ್ಜೆಯನ್ನೂ ಮುಂದಿಡಲಿಲ್ಲ]

ಗುರುಗಳು : [ಅವಮಾನವಾದ ಗುರುಗಳು ಜುಗುಪ್ಸೆಯಿಂದ ನಂದಿವಿಶಾಲನನ್ನು ಮತ್ತೆ ಹೊಡೆದು ಹೇಳಿದರು...] ಪಂಥ ಕಟ್ಟಲು ಹೇಳಿದೆಯಲ್ಲಾ.... ಈಗ ಏನಾಯಿತು?

ಧನಶೆಟ್ಟಿ : "ಗುರುಗಳೇ, ನಿಮ್ಮ ಎತ್ತನ್ನು ತುಂಬಾ ಹೊಗಳಿದಿರಿ..... ಒಂದು ಹೆಜ್ಜೆಯನ್ನೂ ಮುಂದೆ ಇಡಲಿಲ್ಲ..... ನೀವು ಸೋತಿದ್ದೀರಿ..... ನಾನು ಗೆದ್ದೆ ! ಕೊಡಿ, ಸಾವಿರ ಹೊನ್ನಿನ ನಾಣ್ಯಗಳನ್ನು!".





ಗುರುಗಳು : [ಮನೆಗೆ ಹೋಗಿ ಹತಾಶೆಯಿಂದ ಹಣತಂದು ಕೊಡುತ್ತ]
"ಈ ತನಕ ಉಳಿಸಿದ ಹಣವೆಲ್ಲವೂ ಹೋಯಿತು".

ನಂದಿವಿಶಾಲ : [ಮಾರನೆ ದಿನ ರಾತ್ರಿ] "ಒಡೆಯಾ...... ನಿದ್ರೆ ಬಂತೆ?"

ಗುರುಗಳು : "ಇದ್ದದ್ದೆಲ್ಲ ಕಳೆದುಕೊಂಡಮೇಲೆ ನಿದ್ರೆ ಹೇಗೆ ಬರಬೇಕು? ನಿನ್ನ ಮಾತನ್ನು ನಂಬಿ ಪಂಥ ಕಟ್ಟಿದ್ದೇ ನನ್ನದು ದೊಡ್ಡ ತಪ್ಪಾಯಿತು!"

ನಂದಿವಿಶಾಲ : "ಒಡೆಯಾ... ನೀನೇಕೆ ನನ್ನನ್ನು ಜನರ ಮುಂದೆ ಅವಮಾನ ಮಾಡಿ ಹೊಡೆದಿ? ಅದಕ್ಕಾಗಿ ನಾನು ಗಾಡಿಗಳನ್ನು ಎಳೆಯಲಿಲ್ಲ."

ಗುರುಗಳು : [ತಮ್ಮ ತಪ್ಪಿನ ಅರಿವಾಗಿ] "ಹೌದು... ವಿನಯಪೂರ್ವಕವಾಗಿ ಮಾತನಾಡಿಸದೆ ಹೊಡೆದು, ಅಹಂಕಾರದಿಂದ ನಿನ್ನನ್ನು ಅವಮಾನಿಸಿದೆ. ನನ್ನನ್ನು ಕ್ಷಮಿಸು"

ನಂದಿವಿಶಾಲ : "ಆಯ್ತು, ಒಡೆಯಾ...., ಈ ದಿನ ಧನಶೆಟ್ಟಿಯ ಮನೆಗೆ ಹೋಗಿ, ಎರಡು ಸಾವಿರ ಹೊನ್ನಿನ ನಾಣ್ಯಗಳ ಪಂಥ ಕಟ್ಟಿ ಬಾ. ನಾನು ಗಾಡಿಗಳನ್ನು ಎಳೆಯುತ್ತೇನೆ."

ಗುರುಗಳು : [ಧನಶೆಟ್ಟಿಯ ಮನೆಗೆ ಹೋಗಿ] "ಸಾಹುಕಾರರೇ, ನಾನು ಮತ್ತೊಮ್ಮೆ ಪಂಥ ಕಟ್ಟಲು ಸಿದ್ಧನಿದ್ದೇನೆ..... ಈ ಬಾರಿ ಎರಡು ಸಾವಿರ ಹೊನ್ನಿನ ನಾಣ್ಯಕ್ಕೆ ಪಂಥ ಕಟ್ಟೋಣ"

ಧನಶೆಟ್ಟಿ : [ಈ ಗುರುಗಳು ಎಲ್ಲೋ ಮೂರ್ಖರಿರಬೇಕು ಎಂದುಕೊಂಡು]. "ಆಯಿತು... ನಾನು ಪಂಥಕ್ಕೆ ಸಿದ್ಧನಿದ್ದೇನೆ" ಎಂದರು. [ಮಾರನೆ ದಿನ ಹತ್ತು ಹೊರೆತುಂಬಿದ ಗಾಡಿಗಳು ಸಿದ್ಧಗೊಂಡವು. ಊರಿನ ಜನರೆಲ್ಲರೂ ಕುತೂಹಲದಿಂದ ಪಂಥ ನೋಡಲು ಬಂದರು.]

ಗುರುಗಳು : [ನಂದಿವಿಶಾಲನಿಗೆ ಹೂಮಾಲೆ ಹಾಕಿ, ಪ್ರೀತಿಯಿಂದ ಬೆನ್ನು ತಟ್ಟಿ ಬಂಡಿ ಏರಿದರು]. "ಅಂಯ್ಯಾ, ನಂದಿವಿಶಾಲ...., ನೀನು ನಿಜವಾಗಿಯೂ ಸಾಮರ್ಥ್ಯಶಾಲಿ, ದಯಮಾಡಿ ಗಾಡಿಗಳನ್ನು ಎಳೆಯಪ್ಪ......".
[ನಂದಿವಿಶಾಲ ಸಂತೋಷದಿಂದ ಒಂದೇ ಎಳೆತಕ್ಕೆ ಹತ್ತು ಗಾಡಿಗಳನ್ನು ಸರಸರನೆ ಎಳೆಯಿತು. ಜನರೆಲ್ಲರೂ ಆಶ್ಚರ್ಯಗೊಂಡರು.]

ಧನಶೆಟ್ಟಿ : [ಮನೆಗೆ ಹೋಗಿ ಎರಡು ಸಾವಿರ ಹೊನ್ನಿನ ನಾಣ್ಯಗಳನ್ನು ತಂದು ಗುರುಗಳಿಗೆ ಕೊಡುತ್ತ ಹೇಳಿದರು] "ಇಂತಹ ಬಲಶಾಲಿ ಎತ್ತನ್ನು ಪಡೆದಿರುವ ನೀವೇ ಧನ್ಯರು!".



***ಗೌರವ ಕೊಟ್ಟು ಗೌರವ ಪಡೆದುಕೊಳ್ಳಬೇಕು.***

ಕ್ಷೇತ್ರ :– ಮಾತನಾಡುವುದು.

ಸಾಮರ್ಥ್ಯ :– ವಿನಯಪೂರ್ವಕವಾಗಿ ಮಾತನಾಡುವುದು.

**ಓದಿ – ತಿಳಿಯಿರಿ :**

ದಾನ – ಕೊಡುಗೆ; ಒಡೆಯ – ಯಜಮಾನ, ಸ್ವಾಮಿ; ನಾಣ್ಯ – ದುಡ್ಡು, ಹಣ ; ಆಶ್ಚರ್ಯ– ಅಚ್ಚರಿ, ವಿಸ್ಮಯ; ಸಿದ್ಧಗೊಳಿಸು – ತಯಾರಿಸು, ರಚಿಸು; ಅರಿವು – ತಿಳುವಳಿಕೆ, ಜ್ಞಾನ; ಮೂರ್ಖ – ಅವಿವೇಕಿ, ತಿಳಿಗೇಡಿ, ಮೂಢ; ಬಲಿಷ್ಠ – ಶಕ್ತಿಶಾಲಿ, ಬಲಶಾಲಿ; ಬಂಡಿ – ಚಕ್ಕಡಿ, ಗಾಡಿ; ಪಂಥ – ಷರತ್ತು; ಸಮಾಚಾರ – ಸುದ್ದಿ, ವಾರ್ತೆ; ಅಹಂಕಾರ – ಜಂಬ, ಗರ್ವ, ಸೊಕ್ಕು; ಸಲಹು – ಕಾಪಾಡು; ಹೊನ್ನು – ಬಂಗಾರ, ಚಿನ್ನ; ಸಂದೇಹ – ಸಂಶಯ, ಅನುಮಾನ; ಆದರ – ಗೌರವ, ಮರ್ಯಾದೆ; ಹೀನಾಯ – ಹೀನತನ, ಅಪಮಾನ, ನಿಂದನೆ; ಜುಗುಪ್ಸೆ – ಬೇಸರ, ಅಸಹ್ಯ; ಧನ್ಯರು – ಪುಣ್ಯವಂತರು; ಬೆನ್ನುತಟ್ಟು – ಪ್ರೋತ್ಸಾಹಿಸು, ಹುರಿದುಂಬಿಸು; ಹತಾಶೆ – ನಿರಾಶೆ.

**ಗಮನಿಸಿ – ತಿಳಿಯಿರಿ :**

ಮೂಟೆ – ಕಾಳು ಅಥವಾ ವಸ್ತುಗಳನ್ನು ತುಂಬಿದ ಚೀಲ.

ಬಾರುಕೋಲು – ಸಾಕು ಪ್ರಾಣಿಗಳನ್ನು ಹೆದರಿಸಲು, ಹೊಡೆಯಲು ಉಪಯೋಗಿಸುವ ಚರ್ಮ ಮತ್ತು ಬಿದಿರಿನ ಕೋಲಿನಿಂದ ತಯಾರಿಸಿದ ಸಣ್ಣ ಚಾಟಿ.

## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ನಂದಿವಿಶಾಲ ಯಾರ ಹೆಸರು?

_______________

೨. ಗುರುಗಳು ಧನಶೆಟ್ಟಿ ಬಳಿಗೆ ಏಕೆ ಹೋಗಿದ್ದರು?

_______________

೩. ಸ್ಪರ್ಧೆಯ ದಿನ ಎಷ್ಟು ಗಾಡಿಗಳು ಸಿದ್ಧಗೊಂಡಿದ್ದವು?

_______________

೪. ಗುರುಗಳು ಧನಶೆಟ್ಟಿಗೆ ಕೊಟ್ಟ ಹಣ ಎಷ್ಟು?

_______________

೫. ಗುರುಗಳು ಎರಡನೇ ಬಾರಿ ಎಷ್ಟು ನಾಣ್ಯಗಳ ಪಂಥ ಕಟ್ಟಿದರು?

_______________



### ಆ. ಬಿಟ್ಟ ಸ್ಥಳಗಳನ್ನು ತುಂಬಿರಿ.

೧. ನಂದಿವಿಶಾಲ ಎಂಬ ಹೆಸರಿನ __________ ಒಬ್ಬ ಗುರುವಿನ ಬಳಿ ಇತ್ತು.

೨. ಸಾವಿರ __________ ನಾಣ್ಯದ ಪಂಥ ಇಡೋಣ.

೩. ನೀನೇಕೆ ನನ್ನನ್ನು ಜನರ ಮುಂದೆ __________ ಮಾಡಿ ಹೊಡೆದಿ?

೪. "ಅಯ್ಯಾ, ನಂದಿವಿಶಾಲ....." "ನೀನು ನಿಜವಾಗಿಯೂ __________ ದಯಮಾಡಿ ಗಾಡಿಗಳನ್ನು ಎಳೆಯಪ್ಪ".

## ಇ. ಮಾದರಿಯಂತೆ ವಾಕ್ಯಗಳನ್ನು ಸರಿಪಡಿಸಿ ಬರೆಯಿರಿ.

**ಮಾದರಿ :** ದಾನವಾಗಿ ಪಡೆದಿದ್ದರು ಎತ್ತನ್ನು ಗುರುಗಳು.

ಗುರುಗಳು ಎತ್ತನ್ನು ದಾನವಾಗಿ ಪಡೆದಿದ್ದರು.

೧. ಪಡಬೇಡಾ ಒಡೆಯನೆ ಸಂದೇಹ ಅಯ್ಯಾ

_______________

೨. ನಾಣ್ಯದ ಇಡೋಣ ಹೊನ್ನಿನ ಸಾವಿರ ಪಂಥ

_______________

೩. ಒಂದು ಮುಂದಿಡಲಿಲ್ಲ ಹೆಜ್ಜೆಯನ್ನೂ ನಂದಿವಿಶಾಲ

_______________

೪. "ನಾನು ಆಯಿತು ಸಿದ್ಧನಿದ್ದೇನೆ ಪಂಥಕ್ಕೆ"

_______________

೫. ಆಶ್ಚರ್ಯ ಜನರೆಲ್ಲರೂ ಗೊಂಡರು!

_______________



## ಈ. ಯಾರು ಯಾರಿಗೆ ಹೇಳಿದರು.

೧. "ಅಯ್ಯಾ ಒಡೆಯನೆ ಸಂದೇಹ ಪಡಬೇಡ"

ಯಾರು ಹೇಳಿದರು? _______________

ಯಾರಿಗೆ ಹೇಳಿದರು? _______________

೨. "ಏನು ಸಮಾಚಾರ! ಮಧ್ಯಾಹ್ನ ಬಂದಿದ್ದೀರಿ!"

ಯಾರು ಹೇಳಿದರು? _______________

ಯಾರಿಗೆ ಹೇಳಿದರು? _______________

೩. "ಇದ್ದದ್ದಲ್ಲಾ ಕಳೆದುಕೊಂಡ ಮೇಲೆ ನಿದ್ದೆ ಹೇಗೆ ಬರಬೇಕು"?

ಯಾರು ಹೇಳಿದರು? _______________

ಯಾರಿಗೆ ಹೇಳಿದರು? _______________

೪. "ಇಂತಹ ಎತ್ತನ್ನು ಪಡೆದ ನೀವೇ ಧನ್ಯರು!

ಯಾರು ಹೇಳಿದರು? _______________

ಯಾರಿಗೆ ಹೇಳಿದರು? _______________

## ಉ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ನಂದಿವಿಶಾಲ ಗುರುಗಳಿಗೆ ಏನೆಂದು ಹೇಳಿತು?

________________________________________

________________________________________

________________________________________

೨. ಗುರುಗಳಿಗೆ ಅಹಂಕಾರ ಬರಲು ಕಾರಣವೇನು?

________________________________________

________________________________________

________________________________________

೩. ಗುರುಗಳಿಗೆ ಹೇಗೆ ತಮ್ಮ ತಪ್ಪಿನ ಅರಿವಾಯಿತು?

________________________________________

________________________________________

________________________________________

೪. ಗುರುಗಳು ನಂದಿವಿಶಾಲನನ್ನು ಗಾಡಿಗಳನ್ನು ಎಳೆಯಲು ಏನೆಂದು ವಿನಂತಿಸಿಕೊಂಡರು?

________________________________________

________________________________________

________________________________________

೫. ನಂದಿವಿಶಾಲನ ಯಾವ ಗುಣವನ್ನು ನೀವು ಮೆಚ್ಚುವಿರಿ ?

________________________________________

________________________________________

________________________________________

## ಭಾಷಾಭ್ಯಾಸ

**ಗೌರವ ಸೂಚಕ ಪದಗಳನ್ನು ಗಮನಿಸಿರಿ. ಧ್ವನಿಯ ಏರಿಳಿತದಿಂದ ಓದಿರಿ.**

- ನಮಸ್ಕಾರ... ಒಳಗೆ ಬನ್ನಿ ಗುರುಗಳೇ.
- ಗುರುಗಳೇ, ದಯವಿಟ್ಟು ತಂಪಾದ ಪಾನೀಯ ಸ್ವೀಕರಿಸಿರಿ.
- ಮಾನ್ಯರೇ! ತಮ್ಮ ಆಗಮನದಿಂದ ಸಂತೋಷವಾಯಿತು.
- ಪೂಜ್ಯ ಸ್ವಾಮೀಜಿಯ ಆಶೀರ್ವಾದ ನಮ್ಮ ಮೇಲಿರಲಿ.
- ತಾವು ನನ್ನನ್ನು ಪ್ರೋತ್ಸಾಹಿಸಿದ್ದಕ್ಕೆ ಧನ್ಯವಾದಗಳು.
- ಆದರಣೀಯರೇ. . .ತಾವು ಆಗಮಿಸಿದ್ದಕ್ಕೆ ತುಂಬಾ ಖುಷಿಯಾಗಿದೆ.
- ಸನ್ಮಾನ್ಯರ ಅನುದಾನದ ಸಹಕಾರಕ್ಕೆ ನಾವು ಚಿರಋಣಿಯಾಗಿದ್ದೇವೆ.
- ಗೌರವಾನ್ವಿತ ಅತಿಥಿಗಳನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.

## ಭಾಷಾ ಚಟುವಟಿಕೆಗಳು



**ಅ. ಸಮಾನಾರ್ಥಕ ಪದ ಬಳಸಿ ಪದಬಂಧ ಪೂರ್ಣ ಗೊಳಿಸಿರಿ.**

| | | | | |
|---|---|---|---|---|
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |

**ಸಮಾನಾರ್ಥಕ ಪದಗಳು,**

೧. ತಂದೆ
೨. ಹೊಸ
೩. ಯುದ್ಧ
೪. ಬಂಗಾರ
೫. ಮುಖ
೬. ಮಯೂರಿ
೭. ಕಣ್ಣು
೮. ಗಣಪ
೯. ಪಟ್ಟಣ
೧೦. ಗಾಳಿ

## ಅಭ್ಯಾಸ ಚಟುವಟಿಕೆ

- ವಿವಿಧ ಸಭೆ ಸಮಾರಂಭಗಳ ಸ್ವಾಗತ, ವಂದನಾರ್ಪಣೆ, ನಿರೂಪಣೆಯ ಶೈಲಿಗಳನ್ನು ಆಲಿಸಿ, ನೀವೂ ಆಕರ್ಷಕವಾಗಿ ಮಾತನಾಡಿರಿ.
- ಸಾಕು ಪ್ರಾಣಿಗಳ ಚಿತ್ರಗಳನ್ನು ಸಂಗ್ರಹಿಸಿ ಅವುಗಳ ಹೆಸರು, ಜೀವನ ಕ್ರಮ ಬರೆದು ಚಿತ್ರಸಂಪುಟ ತಯಾರಿಸಿರಿ.
- ಈ ಪಾಠವನ್ನು ಗದ್ಯರೂಪದಲ್ಲಿ ಬರೆಯಿರಿ. ತರಗತಿಯಲ್ಲಿ ಕಥಾ ರೂಪದಲ್ಲಿ ಹೇಳಿರಿ.

## ಪೂರಕ ಓದು

### ಬಸವಣ್ಣನವರ ವಚನ



ನುಡಿದರೆ ಮುತ್ತಿನ ಹಾರದಂತಿರಬೇಕು

ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು

ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು

ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ್ನಬೇಕು

ನುಡಿಯೊಳಗಾಗಿ ನಡೆಯದಿದ್ದಡೆ

ಕೂಡಲಸಂಗಮದೇವನೆಂತೊಲಿವನಯ್ಯ

# ಪದ್ಯಪಾಠ – ೭

## ರಜಾಕಾಲ

– ಪಿ. ನಾರಾಯಣ ಭಟ್

**ಪ್ರವೇಶ :**

ಬೇಸಿಗೆ ರಜೆ ಎಂದರೆ ಮಕ್ಕಳಿಗೆ ಎಲ್ಲಿಲ್ಲದ ಸಂತೋಷ. ಇಂದಿನ ಆಧುನಿಕ ಯುಗದಲ್ಲಿ ಯಾಂತ್ರಿಕ ಬದುಕಿನಲ್ಲಿ ಮಕ್ಕಳ ಮನಸ್ಸು ಸಂತೋಷದಿಂದ, ಸ್ವಚ್ಛಂದವಾಗಿರಲು ಬಯಸುತ್ತದೆ. ನಾಲ್ಕು ಗೋಡೆಗಳ ಮಧ್ಯೆ ಕಲಿಯಲಾರದ್ದನ್ನು ಪ್ರಕೃತಿಯ ಮಡಿಲಲ್ಲಿ ಕಲಿಯುತ್ತಾರೆ. ರಜೆಯಲ್ಲಿ ಊರಿಗೆ, ಪ್ರವಾಸಕ್ಕೆ ಹೋಗಿ ಆಟವಾಡುತ್ತಾ, ಕೆರೆಕೊಳಗಳಲ್ಲಿ ಈಜುತ್ತಾ, ಬಂಧು ಬಾಂಧವರೊಡನೆ ನಲಿಯುತ್ತಾ, ಅಜ್ಜ-ಅಜ್ಜಿಯರಿಂದ ಕಥೆಗಳನ್ನು ಆಲಿಸುತ್ತಾ ಕಳೆಯುವ ಸುಂದರ ಕ್ಷಣಗಳು ಸ್ಮರಣೀಯವಾಗಿರುತ್ತವೆ.

**ಪೂರಕ ಚಟುವಟಿಕೆ :**

- ನೀವು ರಜೆಯಲ್ಲಿ ಯಾವ ಯಾವ ಊರಿಗೆ ಪ್ರವಾಸ ಹೋಗಿರುವಿರಿ?
- ನೀವು ಈ ವರ್ಷದ ರಜೆಯಲ್ಲಿ ಯಾವ ಊರಿಗೆ ಹೋಗಲು ಇಷ್ಟಪಡುವಿರಿ?
- ಎರಡು ಗುಂಪು ಆಗಿ ಹಳ್ಳಿಯ ಮತ್ತು ಪಟ್ಟಣದ ಆಟಗಳನ್ನು ಪಟ್ಟಿ ಮಾಡಿರಿ.





ವರ್ಷದ ಕೊನೆಯ ಪರೀಕ್ಷೆಯು ಮುಗಿಯಲು
ನಡೆವುದು ನಮ್ಮ ತಯಾರಿ
ದೂರದ ಹಳ್ಳಿಯ ಅಜ್ಜನ ಮನೆಗೆ
ಮಾರನೇ ದಿನವೇ ಸವಾರಿ

ಬೇರೆಡೆಯಿಂದಲು ಬಂಧುಗಳೆಲ್ಲರು
ಬರುವರು ಮಕ್ಕಳ ಸಹಿತ
ಕುಣಿಯುವ ಮರಿ ಕಪಿಸೇನೆಯ ಮೇಲೆ
ಯಾರಿಗು ಸಿಕ್ಕದು ಹಿಡಿತ

ಬೆಳಗಾದೊಡನೆಯೆ ತಿಂಡಿಯ ಮುಗಿಸಿ
ನದಿ ಕಡೆ ಸಾಗುತ ಈಜುವೆವು.
ಸಂಜೆಯ ಸಮಯದ ವಿಶಾಲ ಬಯಲಲಿ
ಆಟವನಾಡುತ ಕಳೆಯುವೆವು.



ರಾತ್ರಿಯ ವೇಳೆಗೆ ಊಟದ ನಂತರ
ಅಜ್ಜನ ಸುತ್ತಲು ಸೇರುವೆವು.
ರಾಜನ, ರಾಣಿಯ, ದೇವತೆಗಳ ಕತೆ
ಮುಗಿಯುವವರೆಗೂ ಕೂರುವೆವು.

ಕತೆಗಳ ರಾಜಕುಮಾರರ ಹಾಗೆ
ಇರುವೆವು ಅಜ್ಜನ ಮನೆಯಲ್ಲಿ.
ರಜೆಯದು ಮುಗಿದು, ಹೊರಡುವ ಹೊತ್ತು
ಕಂಬನಿ ಹರಿವುದು ಕ್ಷಣದಲ್ಲಿ.



***ಕಲಿಕೆಯ ಪರಿಸರದ ಬದಲಾವಣೆಯೆ, ಸಮಯದ ಸದುಪಯೋಗ***



**ಕವಿ ಪರಿಚಯ :**

**ಪಿ.ನಾರಾಯಣ ಭಟ್‌ರವರು** ಕೊಡಗು ಜಿಲ್ಲೆಯ ಪೆರಾಜೆ ಗ್ರಾಮದವರು. ಶಿವಮೊಗ್ಗದಲ್ಲಿ ದಂತ ವೈದ್ಯಕೀಯ ವೃತ್ತಿಯಲ್ಲಿದ್ದು, ಈಗ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. 'ಚಿಲಿಪಿಲಿಗುಟ್ಟುವ ಚಿಣ್ಣರಿಗೆ', 'ಪುಟಾಣಿ ಪದ್ಯಗಳು', 'ಚಿನ್ನದ ಚೆಂಡು', 'ಬಣ್ಣದ ಬಲೂನು' – ಇವು ಮಕ್ಕಳಿಗಾಗಿ ಬರೆದ ಕವನ ಸಂಕಲನಗಳು. 'ಭಾರತಿಗೆ ಆರತಿ' ಎಂಬ ದೇಶಭಕ್ತಿ ಗೀತೆಗಳ ಪುಸ್ತಕವನ್ನು ರಚಿಸಿದ್ದಾರೆ. ಇವರ **'ಪುಟಾಣಿ ಪದ್ಯಗಳು'** ಕವನ ಸಂಕಲನದಿಂದ ಪ್ರಸ್ತುತ ಪದ್ಯವನ್ನು ಆರಿಸಲಾಗಿದೆ.

ಕ್ಷೇತ್ರ : ಬರೆಯುವುದು.

ಸಾಮರ್ಥ್ಯ : ಸರಳವಾಗಿ, ಸ್ಪಷ್ಟವಾಗಿ, ಸರಿಯಾದ ಕ್ರಮದಲ್ಲಿ ಬರೆಯುವುದು ಮತ್ತು ಓದುವುದು.

**ಓದಿ – ತಿಳಿಯಿರಿ :**

ತಯಾರಿ – ಸಿದ್ಧತೆ; ಬಂಧುಗಳು – ನೆಂಟರು, ಸಂಬಂಧಿಗಳು; ಕಪಿಸೇನೆ – ಕೋತಿಗಳ ಗುಂಪು; ಹಿಡಿತ – ಹತೋಟಿ, ಅಂಕೆ, ಪಟ್ಟು; ಕಂಬನಿ – ಕಣ್ಣೀರು; ಸವಾರಿ – ಪ್ರಯಾಣ

## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಮಕ್ಕಳು ರಜೆ ಬಂದಾಗ ಎಲ್ಲಿಗೆ ಹೋಗುವರು?

______________________________

೨. ಮಕ್ಕಳ ಗುಂಪನ್ನು ಯಾವುದಕ್ಕೆ ಹೋಲಿಸಲಾಗಿದೆ?

______________________________

೩. ಅಜ್ಜನು ಹೇಳುವ ಕಥೆಗಳು ಯಾವುವು?

______________________________

೪. ಅಜ್ಜನ ಮನೆಯಲ್ಲಿ ಮಕ್ಕಳು ಯಾರ ಹಾಗೆ ಇರುವರು?

______________________________

೫. ಮಕ್ಕಳ ಕಣ್ಣಲ್ಲಿ ಯಾವಾಗ ಕಂಬನಿ ಬರುವುದು?

______________________________



### ಆ. ಕೆಳಗಿನ ಪ್ರಾಸಪದಗಳನ್ನು ಹೊಂದಿಸಿ ಬರೆಯಿರಿ.

| ಅ | ಬ | ಉತ್ತರಗಳು |
|---|---|---|
| ೧. ತಯಾರಿ | ಅ) ಕೂರುವೆವು | ________ |
| ೨. ಸಹಿತ | ಆ) ಮನೆಯಲ್ಲಿ | ________ |
| ೩. ಸೇರುವೆವು | ಇ) ಸವಾರಿ | ________ |
| ೪. ಕ್ಷಣದಲ್ಲಿ | ಈ) ಹೊತ್ತು | ________ |
| | ಉ) ಹಿಡಿತ | |

**ಇ. ಕೆಳಗಿನ ವಾಕ್ಯಗಳಲ್ಲಿ ತಪ್ಪಾದ ಅಕ್ಷರಗಳನ್ನು ಸರಿಪಡಿಸಿ ಬರೆಯಿರಿ.**

೧. ರಾಜ, ರಾನಿ, ದೇವತೆಗಳ ಕತೆ, ಕೇಳುವೆಉ.

____________________

೨. ಬಂದುಗಳು, ಮಣೆಗೆ ಬರುವನು.

____________________

೩. ಪಕ್ಷಿ ಆರಿ ಹೋಇತು.

____________________

೪. ಮಕ್ಕಲು ಹಾಡು ಆಡುವರು.

____________________

**ಈ. ಹಿಂದುಮುಂದಾಗಿರುವ ಪದಗಳನ್ನು ಜೋಡಿಸಿ, ಸರಿಯಾದ ವಾಕ್ಯ ರಚಿಸಿರಿ.**

೧. ಅಜ್ಜನ / ಹೋಗುವರು / ಮಕ್ಕಳು / ಮನೆಗೆ

____________________

೨. ಸ್ನಾನ / ಮಾಡಬೇಕು / ಪ್ರತಿದಿನ

____________________

೩. ಹೇಳುವನು / ಕಥೆ / ಅಜ್ಜನು

____________________

೪. ನದಿಯಲ್ಲಿ / ಈಜುವರು / ಮಕ್ಕಳು

____________________

**ಉ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅಜ್ಜನ ಮನೆಯಲ್ಲಿ ಮಕ್ಕಳ ಚಟುವಟಿಕೆಗಳೇನು?

____________________

____________________

____________________

೨. ಅಜ್ಜನೊಂದಿಗೆ ಮಕ್ಕಳು ಹೇಗೆ ಸಮಯ ಕಳೆಯುವರು?

___________________________________

___________________________________

___________________________________

೩. ಮಕ್ಕಳಿಗೆ ಬೇಸಿಗೆ ರಜೆ ಮುಗಿದು ಊರಿಗೆ ಹೊರಡುವಾಗ ಕಂಬನಿ ಏಕೆ ಹರಿಯುವುದು?

___________________________________

___________________________________

___________________________________

೪. ಬೇಸಿಗೆ ರಜದ ನಿಮ್ಮ ಅನುಭವಗಳನ್ನು ಬರೆಯಿರಿ.

___________________________________

___________________________________

___________________________________

___________________________________



## ಭಾಷಾಭ್ಯಾಸ

### ಅ. ನಾನಾರ್ಥ ಬರುವ ಪದಗಳನ್ನು ಓದಿ ತಿಳಿಯಿರಿ.

೧. ಮಕ್ಕಳು ಆಟ **ಆಡುತ್ತಾರೆ** – **ಆಡು** ಸಾಕುತ್ತಾರೆ.

೨. **ಹೊಳೆಯಲ್ಲಿ** ಈಜುವರು – ಚಿನ್ನ **ಹೊಳೆಯುತ್ತದೆ.**

೩. ಆಟಕ್ಕೆ **ಬನ್ನಿ** – **ಬನ್ನಿ** ವೃಕ್ಷ ಪೂಜಿಸುವರು.

೪. ಊಟ **ಸಾಕು** – ಗಿಳಿ **ಸಾಕು**ವರು.

## ಭಾಷಾ ಚಟುವಟಿಕೆ

**ಅ. ಕೊಟ್ಟಿರುವ ಮಾತುಗಳನ್ನು ಅರ್ಥಪೂರ್ಣವಾಗಿ ಬರೆಯಿರಿ.**

೧. ಸಜ್ಜನರ ಸಂಗ ಹೆಜ್ಜೇನು ______________

೨. ನೋಡಿ ತಿಳಿ ಮಾಡಿ ______________

**ಆ. ಮಾದರಿಯಂತೆ ಕೊಟ್ಟಿರುವ ಪದಕ್ಕೆ ಸಂಬಂಧಿಸಿದ ೫ ಪದಗಳನ್ನು ಬರೆಯಿರಿ.**

**ಮಾದರಿ :** ರಜೆ = ಶಾಲೆ, ಮಕ್ಕಳು, ಆಟ, ಚೆಂಡು, ಪ್ರವಾಸ

೧. ಅಜ್ಜ = _______ _______ _______ _______ _______

೨. ಹಸು = _______ _______ _______ _______ _______

## ಅಭ್ಯಾಸ ಚಟುವಟಿಕೆ

೧. ಶಿಕ್ಷಕರ ಮಾರ್ಗದರ್ಶನದಂತೆ ಕೆಲವು ವಿಷಯಗಳಿಗೆ ಆಶುಲೇಖನವನ್ನು ಬರೆಯಿರಿ.(**ಉದಾ:** ನನ್ನ ಮೆಚ್ಚಿನ ಆಟ, ನನ್ನ ಶಾಲೆ, ನಮ್ಮ ಮನೆ... ನನ್ನ ಮೆಚ್ಚಿನ ಗುರುಗಳು...)

೨. ವಿವಿಧ ಭಾವಗೀತೆ, ಭಕ್ತಿಗೀತೆ, ದೇಶಭಕ್ತಿಗೀತೆ, ಜನಪದಗೀತೆಗಳ ಸಂಗ್ರಹ ಮಾಡಿ ಹಾಡಿರಿ.

# ಗದ್ಯಪಾಠ – ೮

## ಪಿಂಗಳನ ಕಥೆ

–ಸುಧಾಮೂರ್ತಿ

**ಪ್ರವೇಶ :**

**"ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಸುಖವಿಲ್ಲ"** . **"ಸತ್ಯಮೇವ ಜಯತೇ"** ಎಂಬ ನಾಣ್ಣುಡಿಯಂತೆ. ಸತ್ಯವನ್ನೇ ಉಸಿರಾಗಿರಿಸಿಕೊಂಡಿದ್ದ ಹರಿಶ್ಚಂದ್ರ, ಪುಣ್ಯಕೋಟಿ ಇವರ ಕಥೆಗಳು ನಮ್ಮೆಲ್ಲರಿಗೂ ಆದರ್ಶಪ್ರಾಯ.

**ಪೂರಕ ಚಟುವಟಿಕೆ :**

- ನಿಮ್ಮ ಶಾಲಾ ಗ್ರಂಥಾಲಯದಲ್ಲಿರುವ ಕಥೆ ಪುಸ್ತಕಗಳನ್ನು ಓದಿ, ಕಥೆ ಹೇಳಿರಿ.
- ನಿಮ್ಮ ಮೇಲೆ ಪ್ರಭಾವ ಬೀರಿದ ಕಥೆಗಳು ಹಾಗೂ ಅವುಗಳ ಮೌಲ್ಯಗಳನ್ನು ತಿಳಿಸಿರಿ.
- ನಿಮ್ಮ ಶಿಕ್ಷಕರಿಂದ ಬೇರೆ ಬೇರೆ ಕಥೆಯನ್ನು ಕೇಳಿ ಅದಕ್ಕೆ ಸಂಬಂಧಿಸಿದ ಶಿರೋನಾಮೆಯನ್ನು ಹೇಳಿರಿ.
- ಕೊಟ್ಟಿರುವ ಪದಗಳನ್ನು ಬಳಸಿಕೊಂಡು ಕಥೆ ರಚಿಸಿರಿ.

  **ಉದಾ:** ಇರುವೆ, ಮರ, ನೀರು, ಎಲೆ, ಪಾರಿವಾಳ, ಬೇಡ, ಬಿಲ್ಲು, ಬಾಣ, ಮರದ ಕೊಂಬೆ.





ಹಿಂದೆ ಗಾಂಧಾರ ದೇಶದಲ್ಲಿ ವಿದ್ಯಾಧರನೆಂಬ ಒಬ್ಬ ಸಾಮ್ರಾಟನಿದ್ದ. ಅವನಿಗೆ ಹೂವಿನ ಹುಚ್ಚು. ಅರಮನೆಯ ತೋಟದಲ್ಲಿ ಬಗೆಬಗೆಯ ಹೂಗಳನ್ನು ಬೆಳೆಸುತ್ತಿದ್ದ. ಬೇರೆ ದೇಶಗಳಿಂದಲೂ ಹೂ ತರಿಸಿ ಅದರ ತಳಿಗಳನ್ನು ಬೆಳೆಸಲು ಪ್ರಯತ್ನಿಸುತ್ತಿದ್ದ. ರಾಜನಿಗೆ ಮಕ್ಕಳಿರಲಿಲ್ಲ. 'ತನ್ನ ರಾಜ್ಯಕ್ಕೆ ಯಾರು ವಾರಸುದಾರರು?' ಎನ್ನುವ ಚಿಂತೆ ಸದಾಕಾಲ ಕಾಡುತ್ತಿತ್ತು.

ಒಂದು ದಿನ ರಾಜ ವಿದ್ಯಾಧರ ಊರಲ್ಲಿ ಡಂಗೂರ ಹೊಡೆಸಿದ.

"ನಾನು ಎಲ್ಲ ಮಕ್ಕಳಿಗೆ ವಿಧವಿಧವಾದ ಹೂವಿನ ಬೀಜಗಳನ್ನು ಕೊಡುತ್ತೇನೆ. ಆರು ತಿಂಗಳಲ್ಲಿ ಅದನ್ನು ಅವರು ಬೆಳೆದು ತೋರಿಸಬೇಕು. ಯಾರು ಚೆನ್ನಾಗಿ ಬೆಳೆಯುತ್ತಾರೋ ಅವರನ್ನು ದತ್ತು ತೆಗೆದುಕೊಳ್ಳುತ್ತೇನೆ. ಆ ಮಗುವೇ ಮುಂದೆ ಈ ರಾಜ್ಯಕ್ಕೆ ರಾಜನಾಗುತ್ತಾನೆ."





ಅರಮನೆಯ ಆವರಣದಲ್ಲಿ ಗದ್ದಲವೋ ಗದ್ದಲ. ಸಾವಿರಾರು ಮಕ್ಕಳೂ ಅವರ ಪಾಲಕರೂ ಬಂದು ಸೇರಿದರು. ಅದರಲ್ಲಿ ಪಿಂಗಳನೂ ಒಬ್ಬ. ಪಿಂಗಳನಿಗೆ ರಾಜನಂತೆ ಗಿಡಗಳ ಮತ್ತು ಹೂವಿನ ಹುಚ್ಚು. ಅವನ ತೋಟದಲ್ಲಿ ಅನೇಕ ಗಿಡಗಳನ್ನು ತನ್ನ ಗೆಳೆಯರೆಂಬಂತೆ ಸಾಕಿದ್ದ.

ರಾಜ ಎಲ್ಲರಿಗೂ ಬೀಜಗಳನ್ನು ಹಂಚಿದ. ಎಲ್ಲ ಪಾಲಕರಿಗೂ ತಮ್ಮ ಮಗ ರಾಜನಾಗಲಿ ಎನ್ನುವ ಆಸೆ ಇದ್ದೇ ಇತ್ತು. ಹೀಗಾಗಿ ಅವರೂ ಮಕ್ಕಳೊಂದಿಗೆ ಗಿಡದ ಆರೈಕೆಗೆ ಸೇರಿಕೊಂಡರು.

ಪಿಂಗಳ ಕುಂಡದಲ್ಲಿ ಹೊಸ ಮಣ್ಣು, ಗೊಬ್ಬರ ಹಾಕಿ, ಬೀಜಗಳನ್ನು ಬಿತ್ತಿದ. ಪ್ರತಿದಿನ ತಪ್ಪದೇ ನೀರು ಹಾಕಿದ. ಎರಡು ತಿಂಗಳಾದರೂ ಮೊಳಕೆ ಒಡೆಯಲೇ ಇಲ್ಲ. ಆದರೆ ಉಳಿದ ಮಕ್ಕಳ ಕುಂಡದಲ್ಲಿ ಮೊಳಕೆ ಮೊಳೆತಿದ್ದವು. ಪಿಂಗಳನಿಗೆ ಯೋಚನೆಯಾಯಿತು. ಆತ ಸಣ್ಣ ಕುಂಡದಿಂದ ದೊಡ್ಡ ಕುಂಡಕ್ಕೆ ಬೀಜಗಳನ್ನು ಸ್ಥಳಾಂತರಿಸಿದ. ಮತ್ತಷ್ಟು ಹೆಚ್ಚು ಗಮನವಿರಿಸಿ ಆರೈಕೆ ಮಾಡಿದ. ಮೊಳಕೆ ಒಡೆಯಲೇ ಇಲ್ಲ.

ಸ್ಪರ್ಧೆಯ ದಿನ ಬಂದಿತು. ಮಕ್ಕಳೆಲ್ಲಾ ಒಳ್ಳೊಳ್ಳೆಯ ಬಟ್ಟೆ ಧರಿಸಿ ತಮ್ಮ ತಮ್ಮ ಕುಂಡದೊಂದಿಗೆ, ದೊಡ್ಡ ದೊಡ್ಡ ಗಿಡದೊಂದಿಗೆ ಅರಮನೆಯ ಮುಂದೆ ಸೇರಿದ್ದರು.

ಪಿಂಗಳನಿಗೆ ಅರಮನೆಗೆ ಹೋಗಲು ಮನಸೇ ಇರಲಿಲ್ಲ.

ಆತನ ತಂದೆ "ಮಗೂ, ನೀನೂ ಸ್ಪರ್ಧೆಗೆ ಹೋಗು" ಎಂದರು.

"ಅಪ್ಪಾ, ಬರೀ ಕುಂಡದೊಂದಿಗೆ ಹೋದರೆ ಅವಮಾನವಲ್ಲವೇ? ಬಹುಮಾನವಂತೂ ದೂರವೇ ಉಳಿಯಿತು." ಎಂದ ಪಿಂಗಳ.

"ಮಗೂ, ನೀನು ಕಷ್ಟಪಟ್ಟು ಕೆಲಸ ಮಾಡಿದ್ದೀಯೇ, ಅದಕ್ಕೆ ಅವಮಾನ ಪಡುವ ಕಾರಣವಿಲ್ಲ. ನೀನು ಹೋಗಲೇಬೇಕು" ಎಂದು ತಂದೆ ಪಿಂಗಳನನ್ನು ಹುರಿದುಂಬಿಸಿದರು.

ಪಿಂಗಳ ವಿಧೇಯನಾಗಿ, ಆದರೆ ಅಳುಕುತ್ತಾ ಕುಂಡವನ್ನು ಹೊತ್ತುಕೊಂಡು ಅರಮನೆಗೆ ಹೋದ.

ಮಹಾರಾಜ ವಿದ್ಯಾಧರ ಪ್ರತಿಯೊಬ್ಬರ ಹೂವಿನ ಗಿಡಗಳನ್ನೂ ನೋಡುತ್ತಾ ಬಂದ. ಆದರೆ ಅವರ ಮುಖದಲ್ಲಿ ಸಂತೋಷವೇ ಇರಲಿಲ್ಲ. ಕೊನೆಗೆ ಆತ ಪಿಂಗಳನ ಕುಂಡದ ಹತ್ತಿರ ಬಂದ.



"ಮಗೂ, ನಾನು ಹೂವಿನ ಗಿಡಗಳ ಸ್ಪರ್ಧೆಗೆ ಕರೆದರೆ ನೀನು ಬರೀ ಕುಂಡ ಹೊತ್ತು ತಂದಿದ್ದೀಯಲ್ಲಪ್ಪಾ?" ಎಂದು ಕೇಳಿದ.

ಅದಕ್ಕೆ ಪಿಂಗಳ "ಅರಸರೇ ನಾನು ನನ್ನ ಪ್ರಯತ್ನವನ್ನು ಶಕ್ತಿಮೀರಿ ಮಾಡಿದ್ದೇನೆ. ಅದಕ್ಕೆ ಸ್ಪರ್ಧೆಗೆ ಬಂದೆ" ಎಂದು ಉತ್ತರಿಸಿದ.

ರಾಜ ವಿದ್ಯಾಧರ ನಕ್ಕು, "ಹೌದು, ಈ ಸ್ಪರ್ಧೆಯಲ್ಲಿ ಜಯ ಪಡೆದವನು ನೀನೆ! ಯಾಕೆಂದರೆ ನಾನು ಕೊಟ್ಟ ಬೀಜಗಳೆಲ್ಲಾ ಹುರಿದ ಬೀಜಗಳಾಗಿದ್ದವು. ಎಂಥಾ ಆರೈಕೆ ಮಾಡಿದರೂ ಗಿಡಗಳು ಬರುತ್ತಿರಲಿಲ್ಲ. ತಮ್ಮ ಮಕ್ಕಳು ರಾಜನಾಗಲೆಂದು ಇತರ ತಂದೆತಾಯಿಗಳು ಬೇರೇ ಬೀಜವನ್ನು ಬಿತ್ತಿ ಹೂ ತರಿಸಿದ್ದಾರೆ. ನೀನು ಮಾತ್ರ ಸತ್ಯಸಂಧ. ಅದಕ್ಕಿಂತ ಹೆಚ್ಚಾಗಿ ನಿನ್ನ ತಾಯಿ-ತಂದೆ ನೀನು ರಾಜನಾಗಲಿ ಎಂದು ಮೋಸಮಾಡಲಿಲ್ಲ. ರಾಜನಾಗುವ ಅರ್ಹತೆ ನಿನಗೆ ಮಾತ್ರ ಇದೆ" ಎಂದ. ಪಿಂಗಳನ ಮುಖ ಸಂತೋಷದಿಂದ ಅರಳಿತು.

## ನಿಷ್ಠೆ, ಪ್ರಾಮಾಣಿಕ ಪ್ರಯತ್ನದಿಂದ ಯಶಸ್ಸು ಸಿದ್ಧಿಸುತ್ತದೆ.

**ಲೇಖಕಿ ಪರಿಚಯ :**



ಬೆಂಗಳೂರಿನ ಇನ್‌ಫೋಸಿಸ್‌ನ **ಸುಧಾಮೂರ್ತಿ** ಯವರು ಹಾವೇರಿ ಜಿಲ್ಲೆಯ ಶಿಗ್ಗಾವಿಯವರು. ಸಣ್ಣ ಕಥೆ, ಕಾದಂಬರಿ ಮತ್ತು ಪ್ರವಾಸ ಕಥನಗಳ ಮೂಲಕ ತಮ್ಮ ಲೇಖನಿಯ ಶಕ್ತಿಯನ್ನು ಹೊರಗೆಡವಿದ್ದಾರೆ. ಈ ಕಥೆಯನ್ನು ಅವರ **"ಮಕ್ಕಳಿಗಾಗಿ ನನ್ನ ಮೆಚ್ಚಿನ ಕಥೆಗಳು"** ಎಂಬ ಪುಸ್ತಕದಿಂದ ಆರಿಸಿಕೊಳ್ಳಲಾಗಿದೆ. ಇವರ ಹಲವು ಕೃತಿಗಳು ದೇಶದ ಅನೇಕ ಭಾಷೆಗಳಲ್ಲಿ ಪ್ರಕಟವಾಗಿವೆ. ಇವರಿಗೆ ಪದ್ಮಶ್ರೀ, ರಾಜ್ಯೋತ್ಸವ, ಅತ್ತಿಮಬ್ಬೆ ಪ್ರಶಸ್ತಿಗಳು ಹಾಗೂ ಗೌರವ ಡಾಕ್ಟರೇಟ್ ಪದವಿ ಸಂದಿವೆ.



| | | |
|---|---|---|
| ಕ್ಷೇತ್ರ | : | ಬರೆಯುವುದು. |
| ಸಾಮರ್ಥ್ಯ | : | ಅಕ್ಷರ ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ನಕಲು ಮಾಡುವುದು. |

### ಓದಿ – ತಿಳಿಯಿರಿ :

ಸಾಮ್ರಾಟ – ಚಕ್ರವರ್ತಿ, ಸಾರ್ವಭೌಮ, ಅರಸ, ರಾಜ; ತಳಿ – ವಂಶ, ಕುಲ; ವಿಧ ವಿಧ – ಬೇರೆ ಬೇರೆ; ಇಷ್ಟ – ಪ್ರೀತಿ, ಬಯಕೆ; ಚಿಂತೆ – ಆತಂಕ, ಕಳವಳ; ಪಾಲಕರು – ಕಾಪಾಡುವ ವ್ಯಕ್ತಿ, ರಕ್ಷಕ, ತಂದೆ ತಾಯಿ; ಆರೈಕೆ – ರಕ್ಷಣೆ, ಪೋಷಣೆ, ಶುಶ್ರೂಷೆ; ಚಿಗುರು – ತಳಿರು, ಕುಡಿ, ಅಂಕುರಿಸು, ಮೊಳಕೆ; ಯೋಚನೆ – ಚಿಂತೆ, ಆತಂಕ, ಕಳವಳ; ಅಳುಕು – ಹೆದರು, ಹಿಂಜರಿಕೆ; ಹುರಿದುಂಬಿಸು – ಉತ್ಸಾಹ ನೀಡು, ಪ್ರೋತ್ಸಾಹಿಸು; ಪ್ರಯತ್ನ – ಉದ್ದೇಶ, ಹೆಚ್ಚು ಶ್ರಮ; ಅರಳು – ವಿಕಾಸವಾಗು; ಸತ್ಯಸಂಧ – ಸತ್ಯವಂತ.

### ಗಮನಿಸಿ – ತಿಳಿಯಿರಿ :

**ವಾರಸುದಾರ** – ವಂಶ ಪರಂಪರೆಯಿಂದ ಬರುವ ಆಸ್ತಿಯ ಹಕ್ಕು ಪಡೆಯುವವರು

**ಡಂಗೂರ** – ತಮಟೆ, ಡೋಲು, ಮೊದಲಾದುವನ್ನು ಬಾರಿಸಿ ಯಾವುದಾದರು ವಿಷಯವನ್ನು ಘೋಷಿಸಿ ಬಹಿರಂಗಪಡಿಸುವುದು.

**ದತ್ತು ಸ್ವೀಕಾರ** – ಮಕ್ಕಳಿಲ್ಲದವರು ಶಾಸ್ತ್ರೋಕ್ತವಾಗಿ ಮತ್ತು ಕಾನೂನುಬದ್ಧವಾಗಿ ಬೇರೆಯವರಿಂದ ಮಗ ಅಥವಾ ಮಗಳನ್ನು ದಾನವಾಗಿ ಪಡೆಯುವುದು.

## ಅಭ್ಯಾಸ

### ಅ. ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ರಾಜ ಅರಮನೆಯ ತೋಟದಲ್ಲಿ ಏನನ್ನು ಬೆಳೆಸಿದ್ದನು?

_______________________________________

೨. ರಾಜ ಮಕ್ಕಳಿಗೆಲ್ಲ ಏನನ್ನು ಹಂಚಿದನು?

_______________________________________

೩. ಮಕ್ಕಳು ಯಾರೊಂದಿಗೆ ಅರಮನೆಗೆ ಬಂದಿದ್ದರು?

_______________________________________

೪. ಪಿಂಗಳ ಗಿಡಗಳನ್ನು ಹೇಗೆ ಸಾಕಿದ್ದನು?

_______________________________________

೫. ಪಿಂಗಳ ಸ್ಪರ್ಧೆಯ ದಿನ ಅರಮನೆಗೆ ಹೇಗೆ ಹೋದನು?

_______________________________________

### ಆ. ಈ ಕೆಳಗಿನ ವಾಕ್ಯಗಳನ್ನು ಓದಿ ಅದರಂತೆ ನಕಲು ಮಾಡಿರಿ.

೧.

| ತಾ | ಯಿ | ಗಿಂ | ತ | | ಬಂ | ಧು | ವಿ | ಲ್ಲ |
|---|---|---|---|---|---|---|---|---|
| | | | | | | | | |

೨.

| ಉ | ಪ್ಪಿ | ಗಿಂ | ತ | | ರು | ಚಿ | ಯಿ | ಲ್ಲ |
|---|---|---|---|---|---|---|---|---|
| | | | | | | | | |

### ಇ. ಆವರಣದಲ್ಲಿರುವ ಪದವನ್ನು ಆರಿಸಿ ಬಿಟ್ಟ ಸ್ಥಳದಲ್ಲಿ ಬರೆಯಿರಿ.

೧. ವಿದ್ಯಾಧರ ರಾಜನಿಗೆ __________ ಗಳೆಂದರೆ ಇಷ್ಟ.

(ತಿಂಡಿ, ಹೂವು, ಹಣ್ಣು, ತರಕಾರಿ)

೨. ಅರಮನೆಯ ಆವರಣದಲ್ಲಿ __________

(ಗಲಿಬಿಲಿ, ಸಡಗರ, ಗಡಿಬಿಡಿ, ಗದ್ದಲವೋ ಗದ್ದಲ)

೩. ಸ್ಪರ್ಧೆಗೆ ಬಂದ ಎಲ್ಲಾ ಮಕ್ಕಳ ಕುಂಡದಲ್ಲಿ ಸಸಿಗಳು __________

(ಬಾಗಿದ್ದವು, ಹರಡಿದ್ದವು, ಚಿಗುರಿದ್ದವು, ಚದುರಿದ್ದವು)

೪. ವಿದ್ಯಾಧರ ರಾಜನು ಕೊಟ್ಟ ಹೂವಿನ ಬೀಜಗಳೆಲ್ಲಾ __________ ಬೀಜಗಳು

(ಹುರಿದ, ಹಸಿಯಾದ, ಒಣಗಿದ, ಚಿಕ್ಕದಾದ)

## ಈ. ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು?

೧. 'ಆರು ತಿಂಗಳಲ್ಲಿ ಅದನ್ನು ಅವರು ಬೆಳೆದು ತೋರಿಸಬೇಕು'

ಯಾರು ಹೇಳಿದರು? ____________________

ಯಾರಿಗೆ ಹೇಳಿದರು? ____________________

೨. 'ನೀನು ಸ್ಪರ್ಧೆಗೆ ಹೋಗು'

ಯಾರು ಹೇಳಿದರು? ____________________

ಯಾರಿಗೆ ಹೇಳಿದರು? ____________________

೩. 'ಬರೀ ಕುಂಡದೊಂದಿಗೆ ಹೋದರೆ ಅವಮಾನವಲ್ಲವೇ'?

ಯಾರು ಹೇಳಿದರು? ____________________

ಯಾರಿಗೆ ಹೇಳಿದರು? ____________________

೪. 'ರಾಜನಾಗುವ ಅರ್ಹತೆ ನಿನಗೆ ಮಾತ್ರ ಇದೆ'

ಯಾರು ಹೇಳಿದರು? ____________________

ಯಾರಿಗೆ ಹೇಳಿದರು? ____________________



## ಉ. ಕೊಟ್ಟಿರುವ ಪದಗಳಿಗೆ ಸರಿಯಾದ ವಿರುದ್ಧಾರ್ಥಕ ಪದ ಹೊಂದಿಸಿ ಬರೆಯಿರಿ.

| | ಅ ಪಟ್ಟಿ | ಬ ಪಟ್ಟಿ | ಉತ್ತರಗಳು |
|---|---|---|---|
| ೧. | ಬಡತನ | ಅ) ಅವಿಶ್ವಾಸ | __________ |
| ೨. | ಸುಖ | ಆ) ಅನಾರೋಗ್ಯ | __________ |
| ೩. | ಆರೋಗ್ಯ | ಇ) ದುಃಖ | __________ |
| ೪. | ವಿಶ್ವಾಸ | ಈ) ಸಿರಿತನ | __________ |
| | | ಉ) ಬೆಳಕು | __________ |

## ಊ. ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ರಾಜ ವಿದ್ಯಾಧರನಿಗೆ ಯಾವ ಚಿಂತೆ ಕಾಡುತ್ತಿತ್ತು?

________________________________________

________________________________________

________________________________________

೨. ಪಿಂಗಳ ಬೀಜಗಳನ್ನು ಹೇಗೆ ಆರೈಕೆ ಮಾಡಿದನು?

________________________________________

________________________________________

________________________________________

೩. ವಿದ್ಯಾಧರ ರಾಜ ಪಿಂಗಳನಿಗೆ ಸತ್ಯಸಂಧ ಎಂದು ಹೇಳಲು ಕಾರಣವೇನು?

________________________________________

________________________________________

________________________________________

೪. ಪಿಂಗಳನಲ್ಲಿ ನೀವು ಮೆಚ್ಚುವ ಗುಣಗಳು ಯಾವುವು?

________________________________________

________________________________________

________________________________________

೫. ಯಾವುದಾದರೂ ಹತ್ತು ಹೂವುಗಳನ್ನು ಹೆಸರಿಸಿರಿ?

________________________________________

________________________________________

________________________________________

## ಭಾಷಾಭ್ಯಾಸ

**ಅ. ಮಾದರಿ ವಾಕ್ಯ ಗಮನಿಸಿ, ಅದರಂತೆಯೇ ಕೆಳಗಿನ ಪದ ಬಳಸಿ ಬೇರೆ ವಾಕ್ಯ ರಚಿಸಿರಿ.**

**ಮಾದರಿ :** **ವಿಧ ವಿಧ :** ಮನೆಯಲ್ಲಿ ವಿಧ ವಿಧವಾದ ವಸ್ತುಗಳಿರುತ್ತವೆ.

೧. ಆರೈಕೆ : ______________________

೨. ಹುರಿದುಂಬಿಸು : ______________________

೩. ಮೊಳಕೆ : ______________________

**ಆ ಆವರಣದಲ್ಲಿರುವ ಪದಗಳನ್ನು ಗಮನಿಸಿ ಬಿಟ್ಟ ಸ್ಥಳ ತುಂಬಿರಿ. ಓದಿ ಬರೆಯಿರಿ.**

**[ತರತರ, ಥರಥರ, ಪಟಪಟ, ಫಳಫಳ, ಜುಳುಜುಳು, ಝುಣಝುಣ]**

೧. ಮಕ್ಕಳು ____________ ದ ಉಡುಪುಗಳನ್ನು ತೊಟ್ಟಿದ್ದರು.

೨. ಆಗಸದಲ್ಲಿ ಗಾಳಿಪಟವು ____________ ನೆ ಹಾರಿತು.

೩. ನಾಣ್ಯಗಳು ತುಂಬಿದ ಚೀಲವು ____________ ಎಂದು ಸದ್ದು ಮಾಡುತ್ತದೆ.

೪. ಆಭರಣವು ____________ ನೆ ಹೊಳೆಯುತ್ತದೆ.

೫. ಭಯಗೊಂಡ ಬಾಲಕನು ____________ ನೆ ನಡುಗಿದ.

೬. ನೀರು ಹರಿಯುವಾಗ ____________ ಎಂದು ಸದ್ದು ಮಾಡುತ್ತದೆ.

**ಇ. ನಿಮಗೆ ತಿಳಿದಿರಲಿ.**

**ಒತ್ತಕ್ಷರದ ಮೂರು ವರ್ಗಗಳು.**

೧. ಮೂಲಾಕ್ಷರಗಳನ್ನು ಹೋಲುವ ಒತ್ತಕ್ಷರಗಳು.

ಜ್ಜ, ಟ್ಟ, ಣ್ಣ, ಬ್ಬ, ಖ್ಖ, ವ್ವ, ಞ್ಞ, ಙ್ಙ.

೨. ಮೂಲಾಕ್ಷರವನ್ನು ಹೋಲುತ್ತಿದ್ದು ತಲೆಕಟ್ಟು ರಹಿತವಾದ ಒತ್ತಕ್ಷರಗಳು

ಕ್ಕ, ಗ್ಗ, ಙ್ಙ, ಚ್ಚ, ಛ್ಛ, ಝ್ಝ, ಠ್ಠ, ಡ್ಡ, ಢ್ಢ, ಥ್ಥ, ದ್ದ, ಧ್ಧ,

ಪ್ಪ, ಫ್ಫ, ಭ್ಭ, ಶ್ಶ, ಷ್ಷ, ಸ್ಸ, ಹ್ಹ, ಳ್ಳ

೩. ಮೂಲಾಕ್ಷರಕ್ಕೆ ಹೋಲಿಕೆ ಇಲ್ಲದ ಒತ್ತಕ್ಷರಗಳು.

ತ್ತ, ನ್ನ, ಮ್ಮ, ಯ್ಯ, ರ್ರ, ೯, ಲ್ಲ,

## ಭಾಷಾ ಚಟುವಟಿಕೆ

**ಅ. ಮಧ್ಯದಲ್ಲಿರುವ ಅಕ್ಷರದ ಸಹಾಯದಿಂದ ಸುತ್ತಲೂ ಇರುವ ಅಕ್ಷರಗಳ ಮೊದಲಿಗೆ ಸೇರಿಸಿ ಪದಗಳನ್ನು ರಚಿಸಿರಿ :**

**ಮಾದರಿ :** ಕಡಲು



## ಆ. ಅಕ್ಷರ ಬಂಧದಲ್ಲಿರುವ ಪ್ರಾಣಿ/ ಪಕ್ಷಿಗಳನ್ನು ಪತ್ತೆಮಾಡಿ ಬರೆಯಿರಿ :

| ಆ | ಕೋ | ಹು | ಸಾ | ಚಿ | ರ | ತೆ | ತ್ತು |
|---|---|---|---|---|---|---|---|
| ಡು | ಳಿ | ಲಿ | ಕು | ಣ | ಕೋ | ಎ | ಹ |
| ಪಾ | ಎ | ವಾ | ಳ | ಆ | ಆ | ಕ | ಳು |
| ಕ | ತ್ತೆ | ಹುಂ | ಆ | ಕ | ರು | ಐ | ಮಾ |
| ಸಾ | ರಂ | ಗ | ದಿ | ವಿ | ದು | ಯ | ಇ |
| ಸಿಂ | ನಾ | ಹಂ | ಸ | ಬಾ | ನ | ರಿ | ಲಿ |
| ಹ | ಣು | ಬ | ಎ | ಮ್ಮೆ | ವಿ | ಗೂ | ಬೆ |
| ದ್ದು | ಕ | ರ | ಖ | ದು | ಲು | ತ | ಕ್ಕು |

**ಮಾದರಿ :** ಆಕಳು

____________________________

____________________________

____________________________



### ಅಭ್ಯಾಸ ಚಟುವಟಿಕೆ

೧. ನಿಮ್ಮ ಮನೆ ಅಥವಾ ಶಾಲೆಯ ಆವರಣದಲ್ಲಿ ವಿವಿಧ ರೀತಿಯ ಹೂವಿನ ಬೀಜಗಳನ್ನು ಹಾಕಿರಿ. ಗಿಡ ನೆಟ್ಟು, ಮರ ಬೆಳೆಸಿರಿ.

೨. ನಿಮಗೆ ತಿಳಿಯದ ಹಾಗೆ ಹುರಿದ ಅಥವಾ ಒಣಗಿದ ಬೀಜಗಳನ್ನು ಕೊಟ್ಟಾಗ ನೀವು ಏನು ಮಾಡುವಿರೆಂಬುದನ್ನು ಬರೆಯಿರಿ.

೩. ಗುಣಿತಾಕ್ಷರ, ಒತ್ತಕ್ಷರವಿರುವ ಪದಗಳ ಉಕ್ತಲೇಖನ ಬರೆಯಿರಿ.

೪. ಪುಟಾಣಿ ವಿಜಯ, ಬಾಲಮಂಗಳ, ಚಂಪಕ, ಚುಟುಕ, ಗಿಳಿವಿಂಡು, ಗೊಂಬೆಮನೆ, ಬಾಲಮಿತ್ರ, ಚಂದಮಾಮ ಮೊದಲಾದ ನಿಯತಕಾಲಿಕೆಗಳನ್ನು ಸಂಗ್ರಹಿಸಿ ಓದಿರಿ.

## ವ್ಯಾಕರಣ ಮಾಹಿತಿ

## ನಾಮಪದ :

ವ್ಯಕ್ತಿ, ವಸ್ತು, ಸ್ಥಳ ಮತ್ತು ಪ್ರಾಣಿಗಳ ಹೆಸರುಗಳನ್ನು ಸೂಚಿಸುವ ಪದಗಳಿಗೆ 'ನಾಮಪದ' ಎನ್ನುವರು.

**ಉದಾಹರಣೆ :** ಸುಮ, ಮಣ್ಣು, ಶಿವಮೊಗ್ಗ, ನವಿಲು ಇತ್ಯಾದಿ.

**ನಾಮ ಪದಗಳನ್ನು ಮೂರು ವಿಧಗಳಾಗಿ ವಿಂಗಡಿಸಿದೆ.**

**ನಾಮಪದಗಳು**

- **ರೂಢನಾಮ**
- **ಅಂಕಿತನಾಮ**
- **ಅನ್ವರ್ಥನಾಮ**

**ರೂಢನಾಮ** : ರೂಢಿಯಿಂದ ಬಂದ ಹೆಸರುಗಳನ್ನು ರೂಢನಾಮ ಎನ್ನುವರು.

**ಉದಾಹರಣೆ** : ನದಿ, ಪರ್ವತ, ಮನುಷ್ಯ, ಹೆಂಗಸು, ದೇಶ, ಬೀಜ, ಮಗ, ಬಟ್ಟೆ.

**ಅಂಕಿತನಾಮ** : ಗುರುತಿಗಾಗಿ ಹಾಗೂ ವ್ಯವಹಾರದ ಉಪಯೋಗಕ್ಕೆ ಇಟ್ಟುಕೊಂಡ ಹೆಸರುಗಳೆಲ್ಲಾ ಅಂಕಿತನಾಮಗಳು.

**ಉದಾಹರಣೆ** : ಗಂಗಾ, ಕಾವೇರಿ, ರಕ್ಷಾ, ಬೆಂಗಳೂರು, ಮಾವಿನಹಣ್ಣು, ವಿದ್ಯಾಧರ,

**ಅನ್ವರ್ಥನಾಮ** : ರೂಪ, ಗುಣ, ಸ್ವಭಾವಾದಿ, ವಿಶೇಷವಾದ ಅರ್ಥಕ್ಕೆ ಅನುಗುಣವಾಗಿ ಇಟ್ಟ ಹೆಸರುಗಳೆಲ್ಲಾ ಅನ್ವರ್ಥನಾಮಗಳು.

**ಉದಾಹರಣೆ** : ವ್ಯಾಪಾರ, ಶಿಕ್ಷಕ, ವೈದ್ಯ, ವಿದ್ವಾಂಸ, ಅರಸ......

ಭಾಗ – ೨

# ಹೆಚ್ಚಿನ ಓದು

## ೧. ಏಕಾಗ್ರತೆ

ದ್ರೋಣಾಚಾರ್ಯರು ರಾಜಕುಮಾರರಿಗೆ ಧನುರ್ವಿದ್ಯೆಯ ಶಿಕ್ಷಣವನ್ನು ನೀಡುತ್ತಿದ್ದರು. ಒಮ್ಮೆ ಅರ್ಜುನನು ಊಟಮಾಡುತ್ತಿರುವಾಗ ದೀಪವು ನಂದಿಹೋಯಿತು. ಆ ಕತ್ತಲೆಯಲ್ಲಿಯೂ ಊಟವನ್ನು ಮುಂದುವರಿಸಿದನು. ಅವನ ಕೈಯಲ್ಲಿರುವ ಅನ್ನದ ತುತ್ತು ಕತ್ತಲೆಯಲ್ಲಿಯೂ ಗುರಿತಪ್ಪದೆ ಬಾಯಿಯೊಳಗೆ ಪ್ರವೇಶಿಸುವುದನ್ನು ಕಂಡ ಅರ್ಜುನನ ತಲೆಯಲ್ಲಿ ಆಗ ವಿಚಾರವೊಂದು ಸುಳಿಯಿತು. "ಕತ್ತಲೆಯಲ್ಲಿ ಕಾಣಿಸದಿದ್ದರೂ ಅಭ್ಯಾಸದ ಬಲದಿಂದ ಬಟ್ಟಲಲ್ಲಿರುವ ಅನ್ನವನ್ನು ಕೈಯಲ್ಲಿ ತೆಗೆದು, ಕೈಯಲ್ಲಿರುವ ತುತ್ತು ಬಾಯಿಗೆ ಸರಿಯಾಗಿ ತಲುಪುವುದಾದರೆ ನಾನು ಇದೇ ಅಭ್ಯಾಸವನ್ನು ಧನುರ್ವಿದ್ಯೆಯಲ್ಲಿಯೂ ಏಕೆ ಅಳವಡಿಸಿಕೊಳ್ಳಬಾರದು?" ಎಂದು ಆಲೋಚಿಸಿದನು.

ಮುಂದೆ ಅರ್ಜುನನು ಸತತ ಅಭ್ಯಾಸದಿಂದ ಕತ್ತಲೆಯಲ್ಲಿಯೂ ಗುರಿಗೆ ಸರಿಯಾಗಿ ಬಾಣವನ್ನು ಪ್ರಯೋಗಿಸುವುದರಲ್ಲಿ ನಿಪುಣನಾದನು.

ಒಮ್ಮೆ ತಮ್ಮ ಶಿಷ್ಯರನ್ನು ಪರೀಕ್ಷಿಸಲು ದ್ರೋಣಾಚಾರ್ಯರು ಒಂದು ಪ್ರಯೋಗವನ್ನು ನಡೆಸಿದರು. ಮರದ ಮೇಲೆ ಒಂದು ಕೃತಕ ಹಕ್ಕಿಯನ್ನು ನಿಲ್ಲಿಸಿ ಅದಕ್ಕೆ ಸರಿಯಾಗಿ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿ ಹಕ್ಕಿಯ ಶಿರಸ್ಸನ್ನು ತುಂಡರಿಸಬೇಕೆಂದು ಶಿಷ್ಯರಿಗೆ ಆಜ್ಞಾಪಿಸಿದರು.

ಮೊದಲು ದುರ್ಯೋಧನನ ಸರದಿ. ಅವನು ಗುರಿ ಇಟ್ಟನು. ಗುರುಗಳು "ನಿನಗೇನು ಕಾಣುತ್ತಿದೆ?" ಎಂದು ಪ್ರಶ್ನಿಸಿದರು. "ಮರ, ಅಲ್ಲಿರುವ ಹಣ್ಣುಗಳು, ಸುತ್ತಮುತ್ತಲೂ ಇರುವ ರಾಜಕುಮಾರರು, ಇವೆಲ್ಲವೂ ಕಾಣಿಸುತ್ತವೆ" ಎಂದನು ದುರ್ಯೋಧನ. ಆಗ ಗುರುಗಳು "ನೀನು ಗುರಿಮುಟ್ಟಲಾರೆ, ಧನುಸ್ಸನ್ನು ಕೆಳಗಿಟ್ಟು ದೂರ ನಡೆ" ಎಂದು ಆಜ್ಞಾಪಿಸಿದರು.

ಅನಂತರ ಯುಧಿಷ್ಠಿರ ಮೊದಲಾದವರು ಇದೇ ರೀತಿ ಉತ್ತರಿಸಿದಾಗ ಅವರನ್ನು ದೂರ ಸರಿಯಲು ದ್ರೋಣಾಚಾರ್ಯರು ಹೇಳುವರು.

ಅನಂತರ ಅರ್ಜುನನ ಸರದಿ. ಅವನು ಗುರಿಯಿಟ್ಟು ಹೇಳಿದ "ನನ್ನ ಕಣ್ಣಿಗೆ ಹಕ್ಕಿಯ ಶಿರಸ್ಸು ಮಾತ್ರ ಗೋಚರಿಸುತ್ತಿದೆ" ಎಂದನು.

ಅನಂತರ ದ್ರೋಣಾಚಾರ್ಯರು ಸಂತೋಷಗೊಂಡು "ನೀನೊಬ್ಬನೆ ಪರೀಕ್ಷೆಯಲ್ಲಿ ಯಶಸ್ವಿಯಾಗಬಲ್ಲೆ. ಗುರಿಯ ಹೊರತು ಬೇರೆ ಯಾವುದನ್ನೂ ಗಮನಿಸದಂತಹ ಏಕಾಗ್ರತೆಯನ್ನು ಸಾಧಿಸಿ ನೀನು ಈ ವಿದ್ಯೆಯಲ್ಲಿ ಸಿದ್ಧಿಯನ್ನೂ ಪಡೆದಿರುವಿ" ಎಂದು ಅವನನ್ನು ಪ್ರೀತಿಯಿಂದ ಅಪ್ಪಿಕೊಂಡರು.

ಇದರಂತೆ ವಿದ್ಯಾರ್ಥಿಗಳಾದ ನೀವೂ ಏಕಾಗ್ರತೆಯನ್ನು ಸಾಧಿಸಿದರೆ ಮಾತ್ರ ಓದಿನಲ್ಲಿ ಯಶಸ್ವಿಯಾಗುವಿರಿ. ಹೀಗೆಯೇ ಮುಂದೆ ಜೀವನರಂಗದಲ್ಲಿಯೂ ನಮ್ಮ ಗುರಿಯ ಕಡೆಗೆ ಏಕಾಗ್ರತೆಯನ್ನು ಸಾಧಿಸಿದರೆ ಮಾತ್ರ ನಾವು ಯಶಸ್ವಿಯಾಗಬಲ್ಲೆವು. ಇಂದು ವಿದ್ಯಾರ್ಥಿಗಳು ಹಾಗೂ ಇತರರು ಗುರಿಯನ್ನು ಬಿಟ್ಟು ಇತರ ವಿಷಯಗಳಲ್ಲಿ ಹೆಚ್ಚು ಗಮನವನ್ನು ಕೊಡುವುದರಿಂದಲೇ ನಮ್ಮ ಶಿಕ್ಷಣ ಮತ್ತು ನಮ್ಮ ಜೀವನವು ಅಸ್ತವ್ಯಸ್ತವಾಗಿದೆ. ಏಕಾಗ್ರತೆಯಿಂದ ಯಾರು ಪ್ರಯತ್ನಿಸುವುದಿಲ್ಲವೋ ಅವರು ಪ್ರಪಂಚದಲ್ಲಿ ಎಂದೂ ಯಶಸ್ವಿಯಾಗಲಾರರು.

### ಅ. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ಅರ್ಜುನನು ಏಕಾಗ್ರತೆಯಿಂದ ಧನುರ್ವಿದ್ಯಾಭ್ಯಾಸವನ್ನು ಪ್ರಾರಂಭಿಸಲು ಪ್ರಚೋದಿಸಿದ ಸನ್ನಿವೇಶವೇನು?

೨. ದ್ರೋಣಾಚಾರ್ಯರು ಯಾರಿಗೆ ಧನುರ್ವಿದ್ಯೆಯನ್ನು ಹೇಳಿಕೊಡುತ್ತಿದ್ದರು?

೩. ದ್ರೋಣಾಚಾರ್ಯರು ತಮ್ಮ ಶಿಷ್ಯರನ್ನು ಹೇಗೆ ಪರೀಕ್ಷಿಸಿದರು?

೪. "ಮರ, ಅಲ್ಲಿರುವ ಹಣ್ಣುಗಳು, ಸುತ್ತಮುತ್ತಲೂ ಇರುವ ರಾಜಕುಮಾರರು, ಇವೆಲ್ಲವೂ ಕಾಣಿಸುತ್ತವೆ" ಈ ಮಾತನ್ನು ಯಾರು ಯಾರಿಗೆ ಹೇಳಿದರು?

೫. ಕೃತಕ ಹಕ್ಕಿಯನ್ನು ನೋಡಿದ ಅರ್ಜುನ ಏನೆಂದು ಹೇಳಿದನು?

೬. ನಾವು ಓದಿನಲ್ಲಿ ಯಶಸ್ಸು ಗಳಿಸಬೇಕಾದರೆ ಏನನ್ನು ಸಾಧಿಸಬೇಕು?



## ೨. 'ಎವರೆಸ್ಟ್ ಪರ್ವತವನ್ನು ಹತ್ತುತ್ತೀಯಾ ಮಗು?'

ಮೇ ೨೯, ೧೯೫೩ ಬಹಳ ಮಹತ್ತರ ದಿನ. ಏಕೆ ಗೊತ್ತಾ? ಅಂದು ಎವರೆಸ್ಟ್ ಪರ್ವತವನ್ನು ತೇನ್‌ಸಿಂಗ್ ಮತ್ತು ಹಿಲರಿ ಹತ್ತಿದ್ದರು. ಆಗ ತೇನ್‌ಸಿಂಗ್‌ಗೆ ಸುಮಾರು ನಲವತ್ತು ವರ್ಷ ವಯಸ್ಸು. ಅವರನ್ನು ಸ್ವಾಗತಿಸಲು, ಅಭಿನಂದಿಸಲು ಬಂದಿದ್ದ ಒಬ್ಬ ಪತ್ರಿಕಾ ವರದಿಗಾರರು ತೇನ್‌ಸಿಂಗ್‌ನನ್ನು ಪ್ರಶ್ನಿಸಿದರು; 'ನಲವತ್ತರ ವಯಸ್ಸಿನಲ್ಲಿ ಇಂತಹ ಮಹತ್ ಸಾಧನೆಯನ್ನು ಮಾಡಿ ನಿಂತಿರುವ ನಿಮಗೆ ಹೇಗನಿಸುತ್ತದೆ?' ಮತ್ತು 'ಪ್ರೇರಣೆ ಏನು?' ಎಂದರು. ತೇನ್‌ಸಿಂಗರು 'ನಾನು ಎವರೆಸ್ಟ್ ಪರ್ವತವನ್ನು ಇಂದು ಹತ್ತಿದೆ ಎಂದು ಯಾರು ಹೇಳಿದರು? ನಾನು ಹತ್ತಿದ್ದು ನನ್ನ ಹತ್ತನೆಯ ವಯಸ್ಸಿನಲ್ಲಿ' ಎಂದರು.

ಆಶ್ಚರ್ಯಗೊಂಡ ಪತ್ರಿಕೆಯವರ ಮುಖ ನೋಡಿ ತೇನ್‌ಸಿಂಗ್‌ರೇ ಮುಂದುವರೆಸಿದರು. ನನ್ನದು ಶೆರ್ಪ ಜನಾಂಗಕ್ಕೆ ಸೇರಿದ ಬಡ ಕುಟುಂಬ. ನಮ್ಮ ಜೀವನಕ್ಕೆ ಆಧಾರ ಇಪ್ಪತ್ತೈದು ಮೇಕೆಗಳು. ಅವುಗಳನ್ನು ಮೇಯಿಸಿಕೊಂಡು ಬರಲು ನಮ್ಮ ತಾಯಿ ಪ್ರತಿದಿನ ನನ್ನನ್ನು ಪರ್ವತದ ತಪ್ಪಲಿಗೆ

ತಂದು ಬಿಡುತ್ತಿದ್ದರು. ಊಟದ ಬುತ್ತಿ, ಕುಡಿಕೆಯಲ್ಲಿ ನೀರು ಕೊಟ್ಟು "ಇಪ್ಪತ್ತೈದು ಮೇಕೆಗಳನ್ನು ಜಾಗರೂಕತೆಯಿಂದ ಮೇಯಿಸಿಕೊಂಡು ಬಾ" ಎನ್ನುತ್ತಿದ್ದರು. ಹೊರಡುವ ಮುಂಚೆ ಪರ್ವತ ಶ್ರೇಣಿಗಳತ್ತ ಕೈ ತೋರಿಸಿ "ಮಗು! ಅಲ್ಲಿ ಕಾಣುತ್ತಿರುವ ಎವರೆಸ್ಟ್ ಪರ್ವತವನ್ನು ಇದುವರೆಗೂ ಯಾರೂ ಹತ್ತಿಲ್ಲ! ನೀನು ಹತ್ತುತ್ತೀಯಾ ಮಗೂ?"ಎಂದು ಕೇಳಿ ಕೆನ್ನೆ ಸವರಿ ಹೋಗುತ್ತಿದ್ದರು. ಇಡೀ ದಿನ ಮೇಕೆಗಳನ್ನು ಮೇಯಿಸುತ್ತಾ ಒಮ್ಮೆ ಮೇಕೆಗಳತ್ತ, ಮತ್ತೊಮ್ಮೆ ಎವರೆಸ್ಟ್ ಪರ್ವತದತ್ತ ನೋಡುತ್ತಾ, ಆ ಪರ್ವತವನ್ನು ಹತ್ತುವ ಹಗಲುಗನಸು ಕಾಣುತ್ತಾ ಸುತ್ತುತ್ತಿದ್ದೆ. ಅಂದು ಮಾನಸಿಕವಾಗಿ ಹತ್ತಲು ಪ್ರಾರಂಭಿಸಿದೆ. ಇಂದು ದೈಹಿಕವಾಗಿಯೂ ಹತ್ತಿದ್ದೇನೆ. ಈ ಸಾಹಸಕ್ಕೆ ತಾಯಿಯ "ಯಾರೂ ಎವರೆಸ್ಟ್ ಪರ್ವತವನ್ನು ಹತ್ತಿಲ್ಲ, ನೀನು ಹತ್ತುತ್ತೀಯಾ ಮಗು"? ಎಂದು ಕೇಳಿದ ಮಾತೇ ಸ್ಫೂರ್ತಿ.

ಅಬ್ಬಬ್ಬಾ! ಎಂತಹ ತಾಯಿ, ಎಂತಹ ಮಗ!

ಮರವನ್ನು ಹತ್ತಬೇಡಾ, ಬಿದ್ದರೆ ಪೆಟ್ಟಾದೀತು ಎಂದು ಹೇಳುವ ವಿದ್ಯಾವಂತರಾದ ತಾಯಿ – ತಂದೆಯರು ನಾವೆಲ್ಲಿ? ಎವರೆಸ್ಟ್ ಪರ್ವತವನ್ನೇ ಹತ್ತು ಎಂದು ಹೇಳಿದ ಆ ಅವಿದ್ಯಾವಂತೆ ತಾಯಿ ಎಲ್ಲಿ? "ನೀನು ದೊಡ್ಡ ಸಾಫ್ಟ್‌ವೇರ್ ಎಂಜಿನಿಯರ್ ಆಗಬೇಕು. ದೊಡ್ಡ ಸಂಬಳ ಪಡೆಯಬೇಕು, ದೊಡ್ಡ ಮನೆ ಕಟ್ಟಿಸಬೇಕು, ದೊಡ್ಡ ಕಾರ್ ತೆಗೆದುಕೊಳ್ಳಬೇಕು, ಶ್ರೀಮಂತ ಹೆಣ್ಣನ್ನು ಮದುವೆಯಾಗಬೇಕು, ದೊಡ್ಡ ಬ್ಯಾಂಕ್ ಬ್ಯಾಲೆನ್ಸ್ ಇಡಬೇಕು, ಒಳ್ಳೆಯ ಆಸ್ತಿಪಾಸ್ತಿ ಕೂಡಿಡೋಣ." ಇದು ನಮ್ಮ ಬೋಧನೆ. ಎವರೆಸ್ಟ್ ಹತ್ತು ಎಂದು ಯಾವ ಹೆತ್ತವರೂ ಹೇಳುವುದಿಲ್ಲ. ಆ ಮಕ್ಕಳೂ ಏರುವುದಿಲ್ಲ. ಆ ಮಕ್ಕಳ ಹೆಸರು ಚರಿತ್ರೆಯ ಪುಟಗಳಲ್ಲಿ ಸೇರುವುದೂ ಇಲ್ಲ! ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ಕೊಡೋಣ, ಸಾಧ್ಯವಾದರೆ ಒಂದು ಮಹತ್ತರ ಸಾಧನೆಯನ್ನು ಮಾಡಲು ಸಲಹೆ ಕೊಡೋಣ, ಪ್ರೋತ್ಸಾಹಿಸೋಣ.

– ಎಸ್. ಷಡಕ್ಷರಿ

['ಕ್ಷಣ ಹೊತ್ತು ಅಣಿ ಮುತ್ತು' ಭಾಗ – ೨ ರಿಂದ ಆಯ್ದುಕೊಳ್ಳಲಾಗಿದೆ.]



**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಎವರೆಸ್ಟ್ ಪರ್ವತವನ್ನು ಮೊದಲ ಬಾರಿಗೆ ಏರಿದವರು ಯಾರು?

೨. ತೇನ್‌ಸಿಂಗ್‌ನ ತಾಯಿ ತನ್ನ ಮಗನಿಗೆ ಏನೆಂದು ಹೇಳುತ್ತಿದ್ದಳು?

೩. ತೇನ್‌ಸಿಂಗ್ ಪತ್ರಕರ್ತರಿಗೆ ಹೇಳಿದ ಮಾತುಗಳೇನು?

೪. ತೇನ್‌ಸಿಂಗ್ ಚಿಕ್ಕಂದಿನಿಂದಲೂ ಯಾವ ಕನಸು ಕಾಣುತ್ತಿದ್ದರು?

೫. ಈ ಘಟನೆಯನ್ನು ಓದಿದಾಗ ಪೋಷಕರ ಪಾತ್ರ ಏನು ಎಂಬುದನ್ನು ತಿಳಿಸಿರಿ.

## ೩. ಸಾವಿತ್ರಿಬಾಯಿ ಫುಲೆ

ಭಾರತ ದೇಶದ ಮಹಾತ್ಮರೆಂದೇ ಪ್ರಖ್ಯಾತರಾದ ಜ್ಯೋತಿರಾವ್ ಫುಲೆಯವರ ಧರ್ಮಪತ್ನಿಯೇ ಸಾವಿತ್ರಿಬಾಯಿ ಫುಲೆ. ಸಾವಿತ್ರಿಬಾಯಿಯವರು ೦೩–೦೧–೧೮೩೧ ರಂದು ಪುಣೆಗೆ ಸಮೀಪವಿರುವ ಕವಠೆ ಎಂಬ ಗ್ರಾಮದಲ್ಲಿ ಹುಟ್ಟಿದರು. ಸಾವಿತ್ರಿಬಾಯಿಗೆ ಒಂಬತ್ತು ವರ್ಷವಾಗಿದ್ದಾಗಲೆ ಜ್ಯೋತಿರಾವ್‌ರೊಂದಿಗೆ ವಿವಾಹ ನಡೆಯಿತು. ಅಂದಿನ ದಿನಗಳಲ್ಲಿ ಸ್ತ್ರೀಯರಿಗೆ ವಿದ್ಯೆ ಕಲಿಯುವುದು ಅಸಾಧ್ಯವಾಗಿತ್ತು.

ಅನ್ಯಾಯ, ಮೌಢ್ಯತೆ ಹಾಗೂ ಶೋಷಣೆಯನ್ನು ತಡೆಗಟ್ಟಬೇಕಾದರೆ ಶಿಕ್ಷಣ ಕೊಡಬೇಕೆಂಬುದು ಜ್ಯೋತಿರಾವ್‌ರವರ ಆಸೆಯಾಗಿತ್ತು. ಮನೆಯಲ್ಲಿಯೇ ತಮ್ಮ ಹೆಂಡತಿ ಸಾವಿತ್ರಿಬಾಯಿಯವರಿಗೆ ಶಿಕ್ಷಣ ನೀಡ ತೊಡಗಿದರು. ಪತಿ ಪತ್ನಿ ಇಬ್ಬರೂ ಸಮಾಜ ಸೇವಾ ದೀಕ್ಷೆಯನ್ನು ಸ್ವೀಕರಿಸಿ ಸೇವೆ ಮಾಡಲು ಪ್ರಾರಂಭಿಸಿದರು. ಸಾವಿತ್ರಿಬಾಯಿ ಅಕ್ಷರಜ್ಞಾನ ಕಲಿತುಕೊಂಡರು.

ಜ್ಯೋತಿರಾವ್‌ರವರ ಬಯಕೆಯಂತೆ ಜನವರಿ ೧೮೪೮ ರ ಜನವರಿ ೧ ರಂದು ಪುಣೆಯಲ್ಲಿ ಬುಧವಾರ ಪೇಟೆಯ ಖಾಡೆಯವರ ವಾಡೆಯಲ್ಲಿ ಅಸ್ಪೃಶ್ಯ ಹುಡುಗಿಯರಿಗಾಗಿ ಪ್ರಥಮ ಶಾಲೆಯನ್ನು ಪ್ರಾರಂಭಿಸಿದರು. ಆ ಶಾಲೆಯಲ್ಲಿ ಸಾವಿತ್ರಿಬಾಯಿಯವರು ಪ್ರಥಮ ಶಿಕ್ಷಕಿಯಾಗಿ ಕಾರ್ಯ ಆರಂಭಿಸಿದರು.

ಜ್ಯೋತಿರಾವ್ ಹಾಗೂ ಸಾವಿತ್ರಿಬಾಯಿಯವರ ದಿಟ್ಟ ಹೆಜ್ಜೆಯನ್ನು ಸಹಿಸದ ಪ್ರತಿಗಾಮಿಗಳು ಕೂಗಾಡತೊಡಗಿದರು. ಜಾತಿ ನಿಯಮ ಮುರಿದು ಸ್ತ್ರೀ ಧರ್ಮ ಮೀರಿದ್ದಾಳೆ ಎಂದು ಆರೋಪಿಸಿದರು. ಜ್ಯೋತಿರಾವ್‌ರವರ ತಂದೆಯವರು ಇವರನ್ನು ಮನೆಯಿಂದ ಹೊರ ಹಾಕಿದರು. ಗಂಡ ಹೆಂಡತಿ ಎಲ್ಲವನ್ನೂ ಸಹಿಸಿದರು. ಆದರೂ ತಮ್ಮ ಕಾರ್ಯವನ್ನು ಮುಂದುವರೆಸಿದರು. ಸಾವಿತ್ರಿಬಾಯಿಯವರು ಮಕ್ಕಳಿಗೆ ಶಿಸ್ತು, ಸ್ವಚ್ಛತೆ, ಹಾಗೂ ಉತ್ತಮ ನಡೆವಳಿಕೆಯನ್ನು ತಿಳಿಸಿಕೊಡುತ್ತಿದ್ದರು. ೧೮೫೨ ರಲ್ಲಿ ಸಾವಿತ್ರಿಬಾಯಿಯವರ ಶಾಲೆಯ ವಾರ್ಷಿಕ ಪರೀಕ್ಷೆ ನಡೆಸಲು ಬಂದ ನ್ಯಾಯಮೂರ್ತಿ ಬ್ರೌನ್‌ರವರು 'ದೇಶದ ಪ್ರಥಮ ಮಹಿಳಾ ಶಕ್ತಿ' ಎಂದು ಘೋಷಿಸಿದರು. ಮುಂದೆ ಸಾವಿತ್ರಿಬಾಯಿಯವರು ಅಸ್ಪೃಶ್ಯ ಮಹಿಳೆಯರಿಗಾಗಿ ಮತ್ತೆ ಮೂರು ಶಾಲೆಗಳನ್ನು ಪ್ರಾರಂಭಿಸಿದರು. 'ಮೂರ್ತಿ ಪೂಜೆಗಿಂತ ಜ್ಞಾನವು ಶ್ರೇಷ್ಠ' ಎಂಬುದು ಇವರ ಹೇಳಿಕೆ.

೧೮೯೭ ರಲ್ಲಿ ಪ್ಲೇಗ್ ರೋಗ ಬಂದಿತು. ಪ್ಲೇಗ್ ರೋಗಿಗಳ ಆರೈಕೆ ಮಾಡುತ್ತ ಛಲಗಾತಿ ಸಾವಿತ್ರಿಬಾಯಿಯವರು ಕೊನೆಯುಸಿರೆಳೆದರು.

– ಜೆ.ಪಿ. ದೊಡಮನಿ

**ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಸಾವಿತ್ರಿಬಾಯಿ ಫುಲೆಯವರ ಗಂಡನ ಹೆಸರೇನು ?

೨. ಸಾವಿತ್ರಿಬಾಯಿಯವರು ಮಹಿಳೆಯರಿಗಾಗಿ ಎಷ್ಟು ಶಾಲೆಗಳನ್ನು ಪ್ರಾರಂಭಿಸಿದರು?

೩. ಸಾವಿತ್ರಿಬಾಯಿ ಬಗ್ಗೆ ಪ್ರತಿಗಾಮಿಗಳ ಆರೋಪವೇನು ?

೪. ಬ್ರೌನ್‌ರವರು ಸಾವಿತ್ರಿಬಾಯಿ ಬಗ್ಗೆ ಏನೆಂದು ಘೋಷಿಸಿದರು ?

೫. ಸಾವಿತ್ರಿಬಾಯಿ ಯಾವ ರೋಗಿಗಳ ಆರೈಕೆ ಮಾಡುತ್ತಾ ಕೊನೆಯುಸಿರೆಳೆದರು ?

✤ ✤ ✤

## ಅರ್ಥಸಹಿತ ಪದಕೋಶ

**ಅ**

ಅನೂಚಾನ – ಪರಂಪರೆಯಿಂದ ನಡೆದುಬಂದ ಪದ್ಧತಿ
ಅರಳು – ಬಿರಿ, ಹಿಗ್ಗು, ಅಗಲವಾಗು
ಅರಿವು – ತಿಳುವಳಿಕೆ, ಜ್ಞಾನ, ಪ್ರಜ್ಞೆ, ಎಚ್ಚರ
ಅಹಂಕಾರ – ಜಂಬ, ಗರ್ವ, ಸೊಕ್ಕು, ಹಮ್ಮು
ಅಳುಕು – ಭಯ, ಹಿಂಜರಿಕೆ.

**ಆ**

ಆತಂಕ – ಚಿಂತೆ, ಭೀತಿ, ತಡೆ, ಅಡ್ಡಿ
ಆಣತಿ – ಆಜ್ಞೆ, ಅನುಮತಿ, ಅಪ್ಪಣೆ
ಆದರಿಸು – ಗೌರವಿಸು, ಮರ್ಯಾದೆ, ಅತಿಥಿಸತ್ಕಾರ, ಉಪಚರಿಸು.
ಆಯಾಸ – ದಣಿವು, ಬಳಲಿಕೆ
ಆರೈಕೆ – ಶುಶ್ರೂಷೆ, ಪೋಷಣೆ, ರಕ್ಷಣೆ
ಆಶ್ಚರ್ಯ – ಅಚ್ಚರಿ, ಸೋಜಿಗ, ವಿಸ್ಮಯ

**ಇ**

ಇಂಚರ – ಇಂಪಾದ ಧ್ವನಿ, ಕೋಗಿಲೆ
ಇಷ್ಟ – ಪ್ರೀತಿ, ಬಯಕೆ, ಹಿತವಾದ

**ಏ**

ಏಳಿಗೆ – ಅಭಿವೃದ್ಧಿ, ಉನ್ನತಿ, ಹೆಚ್ಚಳ

**ಅಂ**

ಅಂಗಾಲು – ಪಾದ, ಕಾಲಿನ ಅಡಿ.

**ಕ**

ಕಡಲೆಕಾಯಿ – ಶೇಂಗಾ
ಕಲರವ – ಮಧುರವಾದ ಧ್ವನಿ
ಕಲಿ – ವೀರ, ಶೂರ, ತಿಳಿ, ಅರಿತುಕೊಳ್ಳು, ಅಭ್ಯಾಸಮಾಡು
ಕಂಗೊಳಿಸು – ಶೋಭಿಸು
ಕಂಬನಿ – ಕಣ್ಣೀರು
ಕಾರಂಜಿ – ನೀರಿನ ಚಿಲುಮೆ
ಕಿಂಡಿ – ರಂಧ್ರ, ಕಿಟಕಿ, ತೂತು.
ಕುಂಡ – ಮಣ್ಣಿನ ಪಾತ್ರೆ
ಕೂಸು – ಕಂದ, ಮಗು, ಶಿಶು

**ಖ**

ಖಂಡಿತ – ನಿಶ್ಚಿತ, ಕತ್ತರಿಸಿದ

### ಗ

ಗಾಳಿ ಸುಳಿದಾವ – ಗಾಳಿ ಬಂದಾವ

### ಚ

ಚಿಂತೆ – ಕಳವಳ, ಆತಂಕ, ಯೋಚನೆ, ವ್ಯಥೆ

ಚಿಗುರು – ಮೊಳಕೆ, ಕುಡಿ, ಅಂಕುರಿಸು

ಚೆಂದ – ಅಂದ, ಚೆಲುವು, ಸೌಂದರ್ಯ, ಸೊಬಗು

### ಜ

ಜೀರ್ಣ – ಪಚನ, ಕರಗಿದ, ಹಳೆಯದಾದ

ಜುಗುಪ್ಸೆ – ಬೇಸರ, ಅಸಹ್ಯ

### ಡ

ಡಂಗೂರ – ತಮಟೆ, ಡೋಲು ಮುಂತಾದವನ್ನು ಹೊಡೆದುಕೊಂಡು ವಿಷಯವನ್ನು ಘೋಷಿಸುವುದು.

### ತ

ತಳಿ – ವಂಶ, ಕುಲ

ತಯಾರಿ – ಸಿದ್ಧತೆ, ಸಜ್ಜು

ತಾಣ – ಸ್ಥಳ, ನೆಲೆ

ತಾವರೆ – ಕಮಲ, ಜಲಜ

ತೊರೆ – ಹೊಳೆ, ಬಿಡು, ತ್ಯಜಿಸು

### ಥ

ಥಂಡ – ಗರಬಡಿದವ, ತೆಪ್ಪಗಾಗುವಿಕೆ

### ದ

ದಷ್ಟಪುಷ್ಟ – ದೃಢಕಾಯ, ಬಲಿಷ್ಠ, ಆರೋಗ್ಯವಂತ

ದಾನ – ಕೊಡುಗೆ, ಉದಾರಿ

### ಧ

ಧನ್ಯ – ಕೃತಾರ್ಥ, ಪುಣ್ಯವಂತ, ಭಾಗ್ಯಶಾಲಿ, ಅದೃಷ್ಟವಂತ

ಧನ್ಯವಾದ – ನಮಸ್ಕಾರ, ವಂದನೆ, ಕೃತಜ್ಞತೆ

### ನ

ನಾಣ್ಯ – ದುಡ್ಡು, ಹಣ

ನುಡಿ – ಮಾತು, ಭಾಷೆ, ಕವನದ ಒಂದು ಚರಣ

### ಪ

ಪಂಥ – ಷರತ್ತು, ಪ್ರತಿಜ್ಞೆ, ಶಪಥ, ಹಠ, ಛಲ, ಸ್ಪರ್ಧೆ, ಯೋಗ್ಯವಾದ ಮಾರ್ಗ, ಕ್ರಮ, ಸಂಪ್ರದಾಯ

ಪರಿಷೆ – ಜಾತ್ರೆ, ಉತ್ಸವ, ಪರಸೆ, ಗುಂಪು, ಸಮೂಹ ಸಂದರ್ಭಗಳಲ್ಲಿ ಕೂಡುವ ಜನಸಂದಣಿ

ಪರಂಪರೆ – ಸಂಪ್ರದಾಯ,

ಪಾಲಕ – ಒಡೆಯ, ಸಂರಕ್ಷಕ, ಕಾಪಾಡುವವ

ಪೌಷ್ಟಿಕ – ಶಕ್ತಿ ವರ್ಧಕ, ಸತ್ವಯುತ, ಪುಷ್ಟಿಯನ್ನು ಕೊಡುವ

ಪ್ರಭಾವ – ಪರಿಣಾಮ, ಬಲ, ಪರಾಕ್ರಮ, ಘನತೆ, ತೇಜಸ್ಸು

ಪ್ರತೀಕ – ಸಂಕೇತ, ಗುರುತು, ಚಿಹ್ನೆ, ಪ್ರತಿರೂಪ

ಪ್ರತೀತಿ – ಜನಜನಿತವಾಗಿ ಬಂದ ತಿಳುವಳಿಕೆ, ಪ್ರಸಿದ್ಧಿ, ವರ್ತಮಾನ, ಪರಿಜ್ಞಾನ

### ಬ

ಬಂಗಾರ – ಚಿನ್ನ, ಹೊನ್ನು, ಕನಕ, ಸುವರ್ಣ

ಬಂಡಿ – ಗಾಡಿ, ಚಕ್ಕಡಿ

ಬಂಧು – ನೆಂಟರು, ಆಪ್ತರು

ಬಳಗ – ಸಂಬಂಧಿಕರು, ಗುಂಪು, ನೆಂಟತನ, ಪರಿವಾರ

## ಮ

ಮಂಜುಳ – ಮಧುರ, ಸುಂದರ

ಮಹಾದ್ವಾರ – ಹೆಬ್ಬಾಗಿಲು, ಮುಖ್ಯದ್ವಾರ, ಮುಖ್ಯಬಾಗಿಲು

ಮಿತ – ಎಲ್ಲೆ ಮೀರದ, ಕಡಿಮೆ

ಮೂರ್ಖ – ಅವಿವೇಕಿ, ತಿಳಿಗೇಡಿ

ಮೋರೆ – ಮುಖ, ವದನ

## ಯ

ಯಾತಕ – ಏತಕ್ಕೆ, ಏಕೆ

ಯೋಚನೆ – ಚಿಂತೆ, ಆತಂಕ, ಕಳವಳ

## ಲ

ಲವಲವಿಕೆ – ಹುರುಪು, ಉತ್ಸಾಹ

## ವ

ವನಸಿರಿ – ಕಾಡಿನ ಸಂಪತ್ತು

ವಹಿವಾಟು – ವ್ಯವಹಾರ, ಕಾರ್ಯಭಾರ

ವಾರಸುದಾರ – ಪಿತ್ರಾರ್ಜಿತ ಆಸ್ತಿಯ ಹಕ್ಕುದಾರ, ಪೋಷಕ

ವಿಶಾಲ – ಅಗಲ, ದೊಡ್ಡ

## ಶ

ಶರೀರ – ದೇಹ, ಮೈ, ಕಾಯ

## ಸ

ಸಮಾಚಾರ – ಸುದ್ದಿ, ವಾರ್ತೆ, ಸಂಗತಿ

ಸತ್ಯಸಂಧ – ಸತ್ಯವಂತ

ಸರಣಿ – ಕ್ರಮ, ದಾರಿ, ಸಾಲು

ಸವಾರಿ – ಮೆರವಣಿಗೆ, ಪ್ರಯಾಣ, ತಿರುಗಾಟ, ಪ್ರಾಣಿ ವಾಹನ ಇತ್ಯಾದಿಗಳ ಮೇಲೆ ಕುಳಿತು ಸಂಚರಿಸುವುದು.

ಸಲಹು – ಕಾಪಾಡು, ರಕ್ಷಿಸು

ಸಾಮ್ರಾಟ – ಚಕ್ರವರ್ತಿ, ರಾಜ, ಅರಸ, ಸಾರ್ವಭೌಮ

ಸೊಬಗು – ಅಂದ, ಚೆಲುವು, ಸೌಂದರ್ಯ

ಸ್ವಚ್ಛ – ನಿರ್ಮಲ, ಶುದ್ಧ, ತೊಳೆದ

ಸಂಪ್ರದಾಯ – ಪದ್ಧತಿ, ಪರಂಪರೆ, ಕಟ್ಟಳೆ, ರೂಢಿ

## ಹ

ಹಗೆತನ – ಶತ್ರುತ್ವ, ವೈರತ್ವ

✤ ✤ ✤